# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1586
ಸದಸ್ಯರ ಹೆಸರು : ಶ್ರೀ ಎನ್. ರವಿಕುಮಾರ್ ( ವಿಧಾನ ಸಭೆಯಿಂದ ಚುನಾಯಿತರಾದವರು)
ಉತ್ತರಿಸಬೇಕಾದ ದಿನಾಂಕ : 20-03-2020
ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ, ಯುವಜನ ಸಬಲೀಕರಣ ಹಾಗೂ ಕ್ರೀಡಾ ಇಲಾಖೆ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ ಸಾಂಸ್ಕೃತಿಕ ನೀತಿಯನ್ನು ರಚಿಸಲಾಗಿದೆಯೇ; ಪ್ರಶಸ್ತಿಗಳನ್ನು ನೀಡಲು ಮತ್ತು ಅಕಾಡೆಮಿಗಳನ್ನು ಸ್ಥಾಪಿಸಲು ಇರುವ ಮಾರ್ಗದರ್ಶಿ ಸೂತ್ರಗಳೇನು;(ವಿವರ ನೀಡುವುದು) | • ಹೌದು, (ರಚಿಸಲಾಗಿದೆ).<br>• ಪ್ರಶಸ್ತಿಗಳನ್ನು ನೀಡುವ ಹಾಗೂ ಅಕಾಡೆಮಿಗಳನ್ನು ಸ್ಥಾಪಿಸುವ ಸಂಬಂಧ ಇರುವ ಮಾರ್ಗಸೂಚಿಯನ್ನು ಕ್ರಮವಾಗಿ **ಅನುಬಂಧ - 1 ಮತ್ತು 2** ರಲ್ಲಿ ಲಗತ್ತಿಸಿದೆ. |
| ಆ) | ಕನ್ನಡ ಭಾಷೆ ಮತ್ತು ಸಂಸ್ಕೃತಿಯ ಉತ್ತೇಜನ ಮತ್ತು ಪ್ರಚಾರಕ್ಕಾಗಿ ಒದಗಿಸಲಾದ ಅನುದಾನ ವೆಚ್ಚವಾಗಿದ್ದರೂ ಯೋಜನೆಯ ಅನುಷ್ಠಾನದಲ್ಲಿ ಕೊರತೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಯೋಜನೆಯ ಅನುಷ್ಠಾನವನ್ನು ಸಮರ್ಪಕಗೊಳಿಸಲು ಸರ್ಕಾರ ಕೈಗೊಂಡ ಕ್ರಮಗಳೇನು; | ಕನ್ನಡ ಭಾಷೆ ಮತ್ತು ಸಂಸ್ಕೃತಿಯ ಉತ್ತೇಜಿಸುವ ಯೋಜನೆಗಳನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಲಾಗಿದೆ. |
| ಇ) | ಯೋಜನೆಗಳನ್ನು ಜಾರಿ ಮಾಡುವ ಅಧಿಕಾರಿಗಳ ಇಚ್ಛಾಶಕ್ತಿಯ ಕೊರತೆಯಿಂದ ಯೋಜನೆಗಳು ವಿಫಲವಾಗಿರುವ ಬಗ್ಗೆ ಸರ್ಕಾರದ ನಿಲುವೇನು? | • ಉದ್ಭವಿಸುವುದಿಲ್ಲ. |

ಸಂಖ್ಯೆ: ಕಸಂವಾ 54 ಕವಿಸ 2020

(ಸಿ.ಟಿ.ರವಿ)
ಮಾನ್ಯ ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ,
ಯುವಜನ ಸಬಲೀಕರಣ ಹಾಗೂ
ಕ್ರೀಡಾ ಇಲಾಖೆ ಸಚಿವರು.

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂ ... ಅನುಬಂಧ-1 1586

1586

<u>ಸರ್ಕಾರದ ಆದೇಶ ಸಂಖ್ಯೆ: ಕಸಂವಾ 222 ಕಸಧ 2016, ದಿನಾಂಕ:02-02-2017ಕ್ಕೆ</u>

## ಅನುಬಂಧ

### ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವತಿಯಿಂದ ಪ್ರದಾನ ಮಾಡುವ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಕುರಿತಂತೆ ಅನುಸರಿಸಬೇಕಾದ ಮಾರ್ಗಸೂಚಿಗಳು.

1. ಕರ್ನಾಟಕ ಬಾಷಿಕ ಪ್ರಾಂತ್ಯವಾಗಿ ಏಕೀಕರಣಗೊಂಡ ವರ್ಷಗಳ ಸಂಖ್ಯೆಗೆ ಆಧಾರಿತವಾಗಿ ಪ್ರತಿ ವರ್ಷವೂ ಪ್ರಶಸ್ತಿಗಳನ್ನು ಮಿತಿಗೊಳಿಸುವುದು ಮತ್ತು ಆಯಾ ವರ್ಷ ಏಕೀಕರಣಗೊಂಡ ವರ್ಷಕ್ಕೆ ಸಮನಾಗಿ ಪ್ರತಿ ವರ್ಷಕ್ಕೆ ಒಂದರಂತೆ ಪ್ರಶಸ್ತಿ ಸಂಖ್ಯಾಮಿತಿ ಏರಿಸುವುದು.
2. ಈ ಪ್ರಶಸ್ತಿಯನ್ನು ಹಲವು ಸಂದರ್ಭಗಳಲ್ಲಿ ರಾಜ್ಯ ಪ್ರಶಸ್ತಿ ಮತ್ತು ರಾಜ್ಯೋತ್ಸವ ಪ್ರಶಸ್ತಿ ಎಂಬ ಹೆಸರುಗಳಿಂದ ಗುರುತಿಸಲಾಗಿದ್ದು. ಈ ಪ್ರಶಸ್ತಿಯನ್ನು ಇನ್ನು ಮುಂದೆ ರಾಜ್ಯೋತ್ಸವ ಪ್ರಶಸ್ತಿ ಎಂದೇ ಗುರುತಿಸುವುದು ಮತ್ತು ಅದರಂತೆ ಕ್ರಮವಹಿಸುವುದು
3. ವಿವಿಧ ಇಲಾಖೆಗಳು ಮತ್ತು ಜಿಲ್ಲಾಡಳಿತಗಳು ನವೆಂಬರ್ ಒಂದರಂದು ನೀಡುತ್ತಿರುವ ಪ್ರಶಸ್ತಿಗಳನ್ನು ಸಹ ರಾಜ್ಯೋತ್ಸವ ಪ್ರಶಸ್ತಿ ಎಂದು ಗುರುತಿಸುತ್ತಿರುವ ಗೊಂದಲವನ್ನುಂಟು ಮಾಡಿದೆ. ಆದ್ದರಿಂದ ಆ ರೀತಿಯ ಪ್ರಶಸ್ತಿಗಳನ್ನು ವಿತರಿಸುವಾಗ ರಾಜ್ಯೋತ್ಸವ ಪ್ರಶಸ್ತಿ ಎಂಬ ಹೆಸರಿನಿಂದ ಗುರುತಿಸತಕ್ಕದ್ದಲ್ಲ.
4. ಈಗಿರುವಂತೆ ವಿಷಯ ಕ್ಷೇತ್ರಗಳನ್ನು ಗುರುತಿಸುವುದು ಮತ್ತು ಹೊಸದಾಗಿ ವಿಕಸನಗೊಳ್ಳುವ ವಿಷಯ ಕ್ಷೇತ್ರಗಳ ಸಾಧಕರನ್ನು ಆರಂಭದಲ್ಲಿ ಸಂಕೀರ್ಣ ಕ್ಷೇತ್ರದಲ್ಲಿ ಗುರುತಿಸುವುದು. ನಂತರದ ದಿನಗಳಲ್ಲಿ ಪ್ರತ್ಯೇಕ ವಿಷಯವಾಗಿ ಗುರುತಿಸಲು ಕ್ರಮ ವಹಿಸುವುದು.
5. ರಾಜ್ಯೋತ್ಸವ ಪ್ರಶಸ್ತಿ ಫಲಕದ ಜೊತೆ ನೀಡುತ್ತಿರುವ ಹಾರ, ಶಾಲು, ಮೈಸೂರು ಪೇಟ, ಹಣ್ಣಿನ ಬುಟ್ಟಿಗಳ ಜೊತೆಗೆ ಚಿನ್ನದ ಪದಕವನ್ನು 25 ಗ್ರಾಂಗಳಿಗೆ ಹೆಚ್ಚಿಸಿ ಪ್ರದಾನ ಮಾಡುವುದು. ಮತ್ತು ಪ್ರಶಸ್ತಿ ಮೊತ್ತವಾಗಿ ಒಂದು ಲಕ್ಷ ರೂಪಾಯಿಗಳನ್ನು ನೀಡುವುದು.
6. ರಾಜ್ಯೋತ್ಸವ ಪ್ರಶಸ್ತಿಯ ಪುರಸ್ಕೃತರನ್ನು ಮರಣೋತ್ತರವಾಗಿ ಆಯ್ಕೆ ಮಾಡುವಂತಿಲ್ಲ.
7. ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರನ್ನು ಆಯ್ಕೆ ಮಾಡುವಾಗ ನೈತಿಕ ಅಧಃಪತನಕ್ಕೊಳಪಡುವ ಅಪರಾಧ ಹಿನ್ನಲೆ ಇಲ್ಲದಿರುವುದನ್ನು ಖಾತರಿ ಪಡಿಸಿಕೊಳ್ಳುವುದು. ಯಾವುದೇ ಕ್ಷೇತ್ರದ ಸಾಧಕರನ್ನು ಪ್ರಶಸ್ತಿಗೆ ಶಿಫಾರಸ್ಸು ಮಾಡುವ ಮುನ್ನ ಆ ವ್ಯಕ್ತಿಯ ಹಿನ್ನಲೆ ಗಮನಿಸುವುದು ಮತ್ತು ಸಮಾಜದಲ್ಲಿ ಗಣನೀಯ ಸಾಧನೆ ಸಲ್ಲಿಸಿದವರೆಂದು ಗುರುತಿಸಲ್ಪಟ್ಟ ವ್ಯಕ್ತಿಗಳನ್ನು ಮಾತ್ರ ಶಿಫಾರಸ್ಸು ಮಾಡುವುದು.
8. ರಾಜ್ಯೋತ್ಸವ ಪ್ರಶಸ್ತಿ ಆಯ್ಕೆಯ ಸಂದರ್ಭದಲ್ಲಿ ಯಾವುದೇ ತಪ್ಪು ಮಾಹಿತಿಗಳ ಆಧಾರದಲ್ಲಿ ಪ್ರಶಸ್ತಿ ಪುರಸ್ಕೃತರನ್ನು ಪ್ರಶಸ್ತಿಗೆ ಆಯ್ಕೆ ಮಾಡಿದ್ದಲ್ಲಿ ಅದನ್ನು ಸರ್ಕಾರವು ಹಿಂಪಡೆಯಲು ಅವಕಾಶ ಇರುತ್ತದೆ.
9. ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರನ್ನು ಆಯ್ಕೆ ಮಾಡುವಾಗ ಸಾಮಾನ್ಯ ಕನಿಷ್ಠ ವಯೋಮಿತಿ 60 ವರ್ಷಗಳನ್ನು ಪೂರೈಸಿರಬೇಕು. ರಾಷ್ಟ್ರೀಯ ಅಥವಾ ಅಂತರರಾಷ್ಟ್ರೀಯ ಮನ್ನಣೆ ಗಳಿಸಿದ ಅತಿ ವಿಶೇಷ ಸಾಧಕರ ಪ್ರಕರಣಗಳಲ್ಲಿ ಮಾತ್ರ ವಿನಾಯಿತಿ ನೀಡಲು ಅವಕಾಶವಿರುತ್ತದೆ.
10. ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರನ್ನು ಆಯ್ಕೆ ಮಾಡುವಾಗ ಸಾಮಾಜಿಕ ನ್ಯಾಯ, ಪ್ರಾದೇಶಿಕ ನ್ಯಾಯ ಮತ್ತು ಲಿಂಗಾಧಾರಿತ ನ್ಯಾಯಗಳನ್ನು ಗಮನದಲ್ಲಿರಿಸಿಕೊಂಡು, ವಿಶೇಷ ಚೇತನ ಸಾಧಕರನ್ನು ಸಹ ಆಯ್ಕೆ ಮಾಡುವುದು. ಹೀಗೆ ಮಾಡುವಾಗ ಜಿಲ್ಲೆಗೆ ಕನಿಷ್ಠ ಒಂದರಂತೆ ಪ್ರಾತಿನಿಧ್ಯ ಒದಗಿಸಲು ಕ್ರಮ ವಹಿಸುವುದು.
11. ಪ್ರತಿ ವಿಷಯ ಕ್ಷೇತ್ರವನ್ನು ಗುರುತಿಸುವಾಗ ಅದರಲ್ಲಿನ ವಿವಿಧ ಶಾಖೆಗಳನ್ನು ಸಹ ಗಮನಿಸುವುದು ಉದಾಹರಣೆಗೆ ವೈದ್ಯಕೀಯ ವಿಭಾಗವನ್ನು ಗುರುತಿಸುವಾಗ, ಆಯುರ್ವೇದ, ಯೋಗ, ಯುನಾನಿ, ಹೋಮಿಯೋಪತಿ, ನಾಟಿವೈದ್ಯ, ಫಿಸಿಯೋಥೆರಪಿ, ಆಪ್ತ ಸಮಾಲೋಚನೆ, ಸಂಶೋಧನೆ ಹೀಗೆ ಸಾಧ್ಯವಾದ ಎಲ್ಲ ಕ್ಷೇತ್ರಗಳನ್ನು ಆದ್ಯತೆಯ ಮೇಲೆ ಪ್ರತಿವರ್ಷವೂ ಗುರುತಿಸಲು ಕ್ರಮ ವಹಿಸುವುದು.

12. ಶಿಕ್ಷಣ, ಆರೋಗ್ಯ ಇನ್ನಿತರ ಕ್ಷೇತ್ರಗಳನ್ನು ಗುರುತಿಸುವಾಗ ಆಯಾ ಕ್ಷೇತ್ರದ ತಜ್ಞರನ್ನು ಮತ್ತು ಸಾಧಕರನ್ನು ಮಾತ್ರ ಪರಿಗಣಿಸಬೇಕು. ಇದು ಎಲ್ಲ ಕ್ಷೇತ್ರಗಳಲ್ಲಿಯೂ ಅನ್ವಯವಾಗುತ್ತದೆ.
13. ಚಾಲ್ತಿಯಲ್ಲಿರುವ ರಾಜ್ಯ ಪ್ರಶಸ್ತಿ ಸಲಹಾ ಸಮಿತಿ ಸದಸ್ಯರು, ಅಕಾಡೆಮಿಯ ಪದಾಧಿಕಾರಿಗಳು ಮತ್ತು ಪ್ರಶಸ್ತಿ ಸಲಹಾ ಸಮಿತಿಯಲ್ಲಿರುವ ತಜ್ಞ ಸದಸ್ಯರು ತಮಗೆ ತಾವೇ ಪ್ರಶಸ್ತಿ ಕೊಟ್ಟುಕೊಳ್ಳುವಂತಿಲ್ಲ ಮತ್ತು ಸ್ವತಃ ಶಿಫಾರಸ್ಸು ಮಾಡಿಕೊಳ್ಳುವಂತಿಲ್ಲ ಅಥವ ಪರಸ್ಪರ ಶಿಫಾರಸ್ಸು ಮಾಡಿಕೊಳ್ಳುವಂತಿಲ್ಲ.
14. ಇತರ ಯಾವುದೇ ಪ್ರಶಸ್ತಿಗಳನ್ನು ಪಡೆದಿರುವುದು ರಾಜ್ಯೋತ್ಸವ ಪ್ರಶಸ್ತಿ ನೀಡಿಕೆಗೆ ತಡೆಯಾಗಬಾರದು.
15. ಪ್ರತಿ ವ್ಯಕ್ತಿಯ ಜೀವಿತಾವಧಿಯಲ್ಲಿ ಒಮ್ಮೆ ಮಾತ್ರ ಅವರ ಸಾಧನೆಯನ್ನು ಪರಿಗಣಿಸಿ ರಾಜ್ಯೋತ್ಸವ ಪ್ರಶಸ್ತಿಗೆ ಆಯ್ಕೆ ಮಾಡಬಹುದು.
16. ರಾಜ್ಯೋತ್ಸವ ಪ್ರಶಸ್ತಿ ಆಯ್ಕೆ ಸಲಹಾಸಮಿತಿಗೆ ಪದನಿಮಿತ್ತ ಸದಸ್ಯರನ್ನು ಹೊರತುಪಡಿಸಿ ಇತರ ತಜ್ಞ ಸದಸ್ಯರನ್ನು ಸತತವಾಗಿ ಎರಡು ವರ್ಷಗಳ ಅವಧಿಗೆ ಮುಂದುವರೆಸುವಂತಿಲ್ಲ.
17. ರಾಜ್ಯೋತ್ಸವ ಪ್ರಶಸ್ತಿ ಆಯ್ಕೆ ಸಲಹಾ ಸಮಿತಿಯನ್ನು ರಚಿಸುವುದು. ಹೀಗೆ ರಚಿಸುವಾಗ ಸಾಮಾಜಿಕ ನ್ಯಾಯ, ಪ್ರಾದೇಶಿಕ ನ್ಯಾಯ ಮತ್ತು ಲಿಂಗಾಧಾರಿತ ನ್ಯಾಯವನ್ನು ಸಾಧ್ಯವಾದಷ್ಟು ಅನುಸರಿಸಬೇಕು.
18. ಯಾವುದೇ ಕ್ಷೇತ್ರದ ವ್ಯಕ್ತಿಯನ್ನು ಪ್ರಶಸ್ತಿಗೆ ಶಿಫಾರಸ್ಸು ಮಾಡುವ ಮುನ್ನ ವ್ಯಕ್ತಿಯ ಹಿನ್ನಲೆ, ಮತ್ತು ವಿಷಯ ಕ್ಷೇತ್ರದಲ್ಲಿ ಗಣನೀಯ ಸಾಧನೆಯನ್ನು ಪರಿಗಣಿಸಿ ಶಿಫಾರಸ್ಸು ಮಾಡುವುದು.

19. ಪ್ರಶಸ್ತಿ ಪುರಸ್ಕೃತರನ್ನು ಆಯ್ಕೆ ಮಾಡುವ ವಿಧಾನ:-

- ಸಾರ್ವಜನಿಕ ಪ್ರಸ್ತಾವನೆಗಳು, ಸಂಘ-ಸಂಸ್ಥೆಗಳ ಸೂಚನೆಗಳು, ಜಿಲ್ಲಾ ಸಹಾಯಕ ನಿರ್ದೇಶಕರ ಕಚೇರಿ ಮೂಲಕ, ಸರ್ಕಾರದ ವಿವಿಧ ಇಲಾಖೆಗಳ ಮೂಲಕ, ಅಕಾಡೆಮಿ-ಪ್ರಾಧಿಕಾರಗಳ ಮೂಲಕ, ಜನಪ್ರತಿನಿಧಿಗಳ ಮೂಲಕ ಸಲ್ಲಿಸುವ ನಾಮನಿರ್ದೇಶನಗಳು ಮತ್ತು ಸಾಧಕರ ಸ್ವಯಂ ಪ್ರಸ್ತಾವನೆ ಸಲ್ಲಿಕೆಯ ಮೂಲಕ ವ್ಯಯಕ್ತಿಕ ವಿವರಗಳ ಸಲ್ಲಿಕೆಗೆ ಅವಕಾಶವನ್ನು ಒದಗಿಸುವುದು.
- ಹೀಗೆ ಸಲ್ಲಿಕೆಯಾದ ವಿವರಗಳನ್ನು ಸಲಹಾ ಸಮಿತಿಯು ಪರಿಶೀಲಿಸಿ, ತನ್ನ ಗಮನಕ್ಕೆ ಬರುವ ಇತರ ಹೆಸರುಗಳನ್ನು ಅವಶ್ಯವಿದ್ದಲ್ಲಿ ಸೇರ್ಪಡೆಗೊಳಿಸಬಹುದು.
- ಸಂಬಂಧಿತ ವಿಷಯಕ್ಷೇತ್ರ ತಜ್ಞರ ಅಭಿಪ್ರಾಯ ಪಡೆದು ಅಂತಿಮವಾಗಿ 1:2 ಅನುಪಾತದಲ್ಲಿ ಆಯ್ಕೆ ಸಮಿತಿಯ ಪರಾಮರ್ಶೆ ಮತ್ತು ಅಂತಿಮ ಆಯ್ಕೆಗಾಗಿ ಸಮಿತಿಯ ಸದಸ್ಯ ಕಾರ್ಯದರ್ಶಿಗಳ ಮೂಲಕ ಪ್ರಶಸ್ತಿ ಆಯ್ಕೆ ಸಮಿತಿಯ ಮುಂದೆ ಮಂಡಿಸುವುದು.
- ಆಯ್ಕೆ ಸಲಹಾ ಸಮಿತಿಯು ಸಲ್ಲಿಸಿದ 1:2 ಅನುಪಾತದ ಪಟ್ಟಿಯಿಂದಲೇ ಅಂತಿಮವಾಗಿ ಪುರಸ್ಕೃತರನ್ನು ಆಯ್ಕೆ ಸಮಿತಿಯು ಅಂತಿಮಗೊಳಿಸುಬೇಕು.
- ಆಯ್ಕೆ ಸಮಿತಿಯು ಆಯ್ಕೆ ಪ್ರಕ್ರಿಯೆಗಾಗಿ ನಡೆಸುವ ಸಭೆಯಲ್ಲಿ ಆಯ್ಕೆ ಸಲಹಾ ಸಮಿತಿಯ ಸದಸ್ಯರನ್ನು ಸಹ ಸಭೆಗೆ ಕಡ್ಡಾಯವಾಗಿ ಆಹ್ವಾನಿಸುವುದು.
- ಆಯ್ಕೆ ಪ್ರಕ್ರಿಯೆಯ ವೇಳಾಪಟ್ಟಿಯನ್ನು ಈ ಕೆಳಕಂಡಂತೆ ರೂಪಿಸಿದೆ.

| | |
|---|---|
| ಪ್ರಸ್ತಾವನೆಗಳ ಸಲ್ಲಿಕೆಗೆ ಕಾಲಾವಧಿ | : ಸೆಪ್ಟೆಂಬರ್ 01 ರಿಂದ 30ರವರೆಗೆ |
| ಆಯ್ಕೆ ಸಲಹಾ ಸಮಿತಿ ಪರಿಶೀಲನ ಶಿಫಾರಸ್ಸು ಪ್ರಕ್ರಿಯೆಗ | : ಅಕ್ಟೋಬರ್ 01 ರಿಂದ 15ರವರೆಗೆ |
| ಆಯ್ಕೆ ಸಮಿತಿಯ ಆಯ್ಕೆ ಪ್ರಕ್ರಿಯೆಗಳು | : ಅಕ್ಟೋಬರ್ 15 ರಿಂದ 25ರವರೆಗೆ |

(ಪಿ.ಎಸ್.ಮಾಲತಿ) 2/2/17

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ.

(ಸಂಸ್ಕೃತಿ ಶಾಖೆ)

## ವಾರ್ಷಿಕ ಪ್ರಶಸ್ತಿಗಳ ಸಾಮಾನ್ಯ ನಿಯಮಾವಳಿಗಳು

1. ಪ್ರಶಸ್ತಿ ಆಯ್ಕೆಗೆ ನಿರ್ದಿಷ್ಟ ವಿಷಯಕ್ಷೇತ್ರದಲ್ಲಿ ಅನುಪಮ ಸಾಧನೆ ಮಾಡಿರುವ ಸಾಧಕರ ಹೆಸರುಗಳನ್ನು ಮಾತ್ರ ಪರಿಗಣಿಸಬೇಕು.
2. ಪ್ರಶಸ್ತಿ ಪರಿಗಣನೆಗೆ ಅರ್ಹ ಹೆಸರುಗಳನ್ನು ಸೂಚಿಸಲು ವಿಷಯಕ್ಷೇತ್ರದಲ್ಲಿ ತಜ್ಞರಾದ 25 ಜನ ವಿದ್ವಾಂಸರು ಮತ್ತು ತಜ್ಞರಿಂದ ಸಲಹೆಗಳನ್ನು ಆಹ್ವಾನಿಸಬೇಕು.
3. ಆಯ್ಕೆಸಮಿತಿಯ ಸದಸ್ಯರು ಸಂಬಂಧಿತ ವಿಷಯ ಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸಿರಬೇಕು.
4. ಆಯ್ಕೆಸಮಿತಿಯ ಅಧ್ಯಕ್ಷರು/ಸದಸ್ಯರನ್ನು ಪ್ರಶಸ್ತಿಗೆ ಪರಿಗಣಿಸಬಾರದು ಹಾಗೂ ಪ್ರಶಸ್ತಿಯನ್ನು ಮರಣೋತ್ತರವಾಗಿ ಪರಿಗಣಿಸಬಾರದು.
5. ಸಮಿತಿಯ ಆಯ್ಕೆಯನ್ನು ಸರ್ಕಾರವು ಒಪ್ಪಬೇಕು.
6. ಇತರ ಪ್ರಶಸ್ತಿಗಳನ್ನು ಪಡೆದಿರುವುದು ಇಲಾಖೆ ಕೊಡಮಾಡುವ ಪ್ರಶಸ್ತಿ ಪರಿಗಣನೆಗೆ ತಡೆಯಾಗಬಾರದು.
7. ಆಯ್ಕೆಗೆ ಪರಿಗಣಿಸುವ ಸಾಧಕರು ಕನಿಷ್ಠ 25 ವರ್ಷಗಳ ಸೇವೆಯನ್ನು ವಿಷಯಕ್ಷೇತ್ರದಲ್ಲಿ ಸಲ್ಲಿಸಿರಬೇಕು.
8. ವಾರ್ಷಿಕ ಪ್ರಶಸ್ತಿಯನ್ನು ಒಬ್ಬರಿಗಿಂತ ಹೆಚ್ಚು ಜನರಿಗೆ ನೀಡುವಂತೆ ಆಯ್ಕೆ ಸಮಿತಿ ಸೂಚಿಸಬಾರದು. ಹಾಗೂ ಒಂದೆ ಪ್ರಶಸ್ತಿಯನ್ನು ವಿಭಾಗಿಸಿ ಒಬ್ಬರಿಗಿಂತ ಹೆಚ್ಚು ಜನರಿಗೆ ನೀಡಲು ಪರಿಗಣಿಸಬಾರದು.
9. ಆಯ್ಕೆ ಸಮಿತಿಯು ವಿಷಯಕ್ಷೇತ್ರ ತಜ್ಞರು ಸೂಚಿಸಿರುವ ಹೆಸರುಗಳಷ್ಟೆ ಅಲ್ಲದೆ ಸಭೆಯಲ್ಲಿ ವಿವರವಾದ ಚರ್ಚೆ ನಡೆಸುವ ಮೂಲಕ ಬೇರೆ ಹೆಸರುಗಳನ್ನು ಸಹ ಪರಿಗಣಿಸಬಹುದು.
10. ಈ ಪ್ರಶಸ್ತಿಗಳನ್ನು ನೀಡುವಾಗ ಭಾರತೀಯ ಪೌರರನ್ನು ಮಾತ್ರ ಪರಿಗಣಿಸಬೇಕು. ಹಾಗೆ ಪರಿಗಣಿಸಲ್ಪಡುವ ಮಹನೀಯರು ಯಾವುದೇ ಅಪರಾಧ ಹಿನ್ನೆಲೆ ಹೊಂದಿರಬಾರದು.
11. ಆಯ್ಕೆ ಸಮಿತಿಯು ಪ್ರಶಸ್ತಿ ಆಯ್ಕೆಪ್ರಕ್ರಿಯೆ ನಂತರ ಸರ್ಕಾರಿ ಆದೇಶ ಪ್ರಕಟಣೆಯವರೆಗೆ ಗೋಪ್ಯತೆಯನ್ನು ಕಾಪಾಡಬೇಕು.
12. ಯಾವುದೇ ಪ್ರಶಸ್ತಿಗೆ ಅರ್ಹರು ಲಭ್ಯವಿಲ್ಲವೆಂದು ಸಮಿತಿಯು ಸಾಧಾರವಾಗಿ ತೀರ್ಮಾನಿಸಿದ ಪಕ್ಷದಲ್ಲಿ ಆ ವರ್ಷದ ಆಯ್ಕೆ ಪ್ರಕ್ರಿಯೆಯನ್ನು ಕೈ ಬಿಡತಕ್ಕದ್ದು.
13. ಎಲ್ಲಾ ಪ್ರಶಸ್ತಿ ಆಯ್ಕೆಸಮಿತಿಗಳಿಗೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರು/ಆಯುಕ್ತರು ಸದಸ್ಯ ಕಾರ್ಯದರ್ಶಿ ಆಗಿರುತ್ತಾರೆ.
14. ಎಲ್ಲಾ ಆಯ್ಕೆ ಸಮಿತಿಗಳಲ್ಲಿಯೂ ಮಹಿಳೆಯರಿಗೆ ಸೂಕ್ತ ಪ್ರಾತಿನಿಧ್ಯವನ್ನು ಕಲ್ಪಿಸಬೇಕು.
15. ಎಲ್ಲಾ ಪ್ರಶಸ್ತಿ ಆಯ್ಕೆ ಸಮಿತಿಗಳಿಗೆ ಅಧ್ಯಕ್ಷರು ಮತ್ತು ಸದಸ್ಯರನ್ನು ಸರ್ಕಾರವು ಆದೇಶದ ಮೂಲಕ ನೇಮಕ ಮಾಡುವುದು.
16. **ಸಾಹಿತ್ಯ–ಸಂಸ್ಕೃತಿ ವಿಭಾಗ:** ಸಾಹಿತ್ಯ–ಸಂಸ್ಕೃತಿ ವಿಭಾಗದ ಪ್ರಶಸ್ತಿ ಆಯ್ಕೆ ಸಮಿತಿಗೆ ಸಾಹಿತ್ಯ–ಸಂಸ್ಕೃತಿ ಕ್ಷೇತ್ರದ ಹಿರಿಯ ಸಾಧಕರನ್ನು ಅಧ್ಯಕ್ಷರನ್ನಾಗಿ ಆಯ್ಕೆ ಮಾಡಲಾಗುವುದು. ಸಾಹಿತ್ಯ, ಸಂಶೋಧನೆ, ನಾಡು–ನುಡಿ ಸಂರಕ್ಷಣೆ, ದಾಸಸಾಹಿತ್ಯ, ಮಹಿಳಾ ಸಾಹಿತಿಗಳೂ ಸೇರಿದಂತೆ ಹತ್ತು ಸದಸ್ಯರು ಮತ್ತು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರು ಪದನಿಮಿತ್ತ ಸದಸ್ಯರಾಗಿರುತ್ತಾರೆ. ಸಮಿತಿಯ ಪದನಿಮಿತ್ತ ಸದಸ್ಯರ ಸ್ಥಾನವು ತೆರವಾಗಿದ್ದ ಪಕ್ಷದಲ್ಲಿ, ಆ ಸ್ಥಾನವನ್ನು ಸಹ ನಾಮನಿರ್ದೇಶನದ ಮೂಲಕವೇ ನೇಮಕಮಾಡಲಾಗುವುದು. ಸಮಿತಿಯ ಒಟ್ಟು ಸದಸ್ಯ ಸಂಖ್ಯೆ ಹದಿಮೂರು. ಸಭೆಯ ಕನಿಷ್ಠ ಕೋರಂ ಏಳು ಆಗಿರುತ್ತದೆ.
17. ಬಸವ ರಾಷ್ಟ್ರೀಯ ಪುರಸ್ಕಾರ ಆಯ್ಕೆ ಸಮಿತಿಯಲ್ಲಿ ವಚನ ಸಾಹಿತ್ಯ, ಸಂಸ್ಕೃತಿ, ಸಾಮಾಜಿಕ ಕ್ಷೇತ್ರದ ಒಬ್ಬ ಹಿರಿಯ ಸಾಧಕರನ್ನು ಅಧ್ಯಕ್ಷರನ್ನಾಗಿ ಆಯ್ಕೆ ಮಾಡಲಾಗುವುದು. ಜಗಜ್ಯೋತಿ ಬಸವೇಶ್ವರರು ಪ್ರತಿಪಾದಿಸಿದ ಸಿದ್ಧಾಂತ, ಶರಣ ಸಂಸ್ಕೃತಿ, ಶರಣ ಸಾಹಿತ್ಯ ಕ್ಷೇತ್ರಗಳಲ್ಲಿ ಅನನ್ಯ ಸಾಧನೆಗೈದಿರುವ, ಸಾಮಾಜಿಕ ನ್ಯಾಯ ಮತ್ತು ಸಾಮರಸ್ಯಕ್ಕಾಗಿ ಶ್ರಮಿಸುತ್ತಿರುವ ಐದು ಹಿರಿಯ ವಿದ್ವಾಂಸರು/ತಜ್ಞರು/ಸಾಮಾಜಿಕ ಕಾರ್ಯಕರ್ತರನ್ನು ಸಮಿತಿ ಸದಸ್ಯರನ್ನಾಗಿ ಆಯ್ಕೆ ಮಾಡಲಾಗುವುದು. ಒಟ್ಟು ಸದಸ್ಯ ಸಂಖ್ಯೆ ಏಳು. ಸಭೆಯ ಕನಿಷ್ಠ ಕೋರಂ ನಾಲ್ಕು ಆಗಿರುತ್ತದೆ.

...3/-

18. ಟಿ.ಚೌಡಯ್ಯ ರಾಷ್ಟ್ರೀಯ ಪ್ರಶಸ್ತಿ ಆಯ್ಕೆ ಸಮಿತಿಯಲ್ಲಿ ಹಿರಿಯ ಸಂಗೀತ ಕ್ಷೇತ್ರದ ಹಿರಿಯ ವಿದ್ವಾಂಸರನ್ನು ಅಧ್ಯಕ್ಷರನ್ನಾಗಿ ಆಯ್ಕೆ ಮಾಡಲಾಗುವುದು. ಹಿಂದುಸ್ಥಾನಿ ಮತ್ತು ಕರ್ನಾಟಕ ಶಾಸ್ತ್ರೀಯ ವಾದ್ಯ ಸಂಗೀತ ಕ್ಷೇತ್ರದಲ್ಲಿ ಅನುಪಮ ಸಾಧನೆ ಮಾಡಿರುವ ನಾಲ್ಕು ವಿದ್ವಾಂಸರು/ಕಲಾವಿದರು ಸಮಿತಿ ಸದಸ್ಯರಾಗಿರುತ್ತಾರೆ ಮತ್ತು ಕರ್ನಾಟಕ ಸಂಗೀತ–ನೃತ್ಯ ಅಕಾಡೆಮಿಯ ಅಧ್ಯಕ್ಷರು ಪದನಿಮಿತ್ತ ಸದಸ್ಯರಾಗಿರುತ್ತಾರೆ. ಸಮಿತಿಯ ಪದನಿಮಿತ್ತ ಸದಸ್ಯರ ಸ್ಥಾನವು ತೆರವಾಗಿದ್ದ ಪಕ್ಷದಲ್ಲಿ, ಆ ಸ್ಥಾನವನ್ನು ಸಹ ನಾಮನಿರ್ದೇಶನದ ಮೂಲಕವೇ ನೇಮಕಮಾಡಲಾಗುವುದು. ಸಮಿತಿಯ ಒಟ್ಟು ಸದಸ್ಯರ ಸಂಖ್ಯೆ ಏಳು. ಸಭೆಯ ಕನಿಷ್ಠ ಕೋರಂ ನಾಲ್ಕು ಆಗಿರುತ್ತದೆ.

19. ಸಂಗೀತ ವಿಭಾಗ: ಸಂಗೀತ ವಿಭಾಗಕ್ಕೆ ಶಾಸ್ತ್ರೀಯ ಸಂಗೀತ, ಸುಗಮ ಸಂಗೀತ, ಕಥಾ ಕೀರ್ತನ, ಗಮಕ ಕ್ಷೇತ್ರಗಳಲ್ಲಿನ ಒಬ್ಬ ಹಿರಿಯ ಕಲಾವಿದರು/ ತಜ್ಞರು ಸಮಿತಿಯ ಅಧ್ಯಕ್ಷರಾಗಿರುತ್ತಾರೆ. ಶಾಸ್ತ್ರೀಯ ಸಂಗೀತ, ಸುಗಮ ಸಂಗೀತ, ಗಮಕ/ಕಥಾ ಕೀರ್ತನ ಕ್ಷೇತ್ರಗಳ ಎಂಟು ಸದಸ್ಯರು ಮತ್ತು ಕರ್ನಾಟಕ ಸಂಗೀತ–ನೃತ್ಯ ಅಕಾಡೆಮಿಯ ಅಧ್ಯಕ್ಷರು ಪದನಿಮಿತ್ತ ಸದಸ್ಯರಾಗಿರುವ ಸಮಿತಿಯ ಪದನಿಮಿತ್ತ ಸದಸ್ಯರ ಸ್ಥಾನವು ತೆರವಾಗಿದ್ದ ಪಕ್ಷದಲ್ಲಿ, ಆ ಸ್ಥಾನವನ್ನು ಸಹ ನಾಮನಿರ್ದೇಶನದ ಮೂಲಕವೇ ನೇಮಕಮಾಡಲಾಗುವುದು. ಸಮಿತಿಯ ಒಟ್ಟು ಸದಸ್ಯರ ಸಂಖ್ಯೆ ಹನ್ನೊಂದು. ಸಭೆಯ ಕನಿಷ್ಠ ಕೋರಂ ಆರು ಆಗಿರುತ್ತದೆ.

20. ನೃತ್ಯ ವಿಭಾಗ: ನೃತ್ಯ ವಿಭಾಗಕ್ಕೆ ಹಿರಿಯ ನೃತ್ಯ ಕಲಾವಿದರು/ವಿದ್ವಾಂಸರನ್ನು ಆಯ್ಕೆ ಸಮಿತಿಯ ಅಧ್ಯಕ್ಷರನ್ನಾಗಿ ಆಯ್ಕೆ ಮಾಡಲಾಗುವುದು. ನೃತ್ಯ ಕ್ಷೇತ್ರದಲ್ಲಿನ ನಾಲ್ಕು ಹಿರಿಯ ನೃತ್ಯ ಕಲಾವಿದರು/ವಿದ್ವಾಂಸರು ಸದಸ್ಯರಾಗಿರುತ್ತಾರೆ. ಈ ಸಮಿತಿಗೆ ಕರ್ನಾಟಕ ಸಂಗೀತ–ನೃತ್ಯ ಅಕಾಡೆಮಿಯ ಅಧ್ಯಕ್ಷರು ಪದನಿಮಿತ್ತ ಸದಸ್ಯರಾಗಿರುತ್ತಾರೆ. ಸಮಿತಿಯ ಪದನಿಮಿತ್ತ ಸದಸ್ಯರ ಸ್ಥಾನವು ತೆರವಾಗಿದ್ದ ಪಕ್ಷದಲ್ಲಿ, ಆ ಸ್ಥಾನವನ್ನು ಸಹ ನಾಮನಿರ್ದೇಶನದ ಮೂಲಕವೇ ನೇಮಕ ಮಾಡಲಾಗುವುದು. ಸಮಿತಿಯ ಒಟ್ಟು ಸದಸ್ಯ ಸಂಖ್ಯೆ ಏಳು. ಸಭೆಯ ಕನಿಷ್ಠ ಕೋರಂ ನಾಲ್ಕು ಆಗಿರುತ್ತದೆ.

21. ಜಾನಪದ ಶ್ರೀ ಪ್ರಶಸ್ತಿ ಆಯ್ಕೆ ಸಮಿತಿಯಲ್ಲಿ ಜನಪದ/ಯಕ್ಷಗಾನ/ಬಯಲಾಟ ಪ್ರಕಾರಗಳ ಕಲಾವಿದರು/ವಿದ್ವಾಂಸರಲ್ಲಿ ಒಬ್ಬ ಹಿರಿಯರನ್ನು ಅಧ್ಯಕ್ಷರನ್ನಾಗಿ ಆಯ್ಕೆ ಮಾಡಲಾಗುವುದು. ಜನಪದ ಯಕ್ಷಗಾನ ಬಯಲಾಟ ಪ್ರಕಾರಗಳ ನಾಲ್ಕು ಕಲಾವಿದರು/ತಜ್ಞರು ಸಮಿತಿಯ ಸದಸ್ಯರಾಗಿರುತ್ತಾರೆ. ಕರ್ನಾಟಕ ಜಾನಪದ ಅಕಾಡೆಮಿ ಮತ್ತು ಕರ್ನಾಟಕ ಯಕ್ಷಗಾನ ಬಯಲಾಟ ಅಕಾಡೆಮಿ ಅಧ್ಯಕ್ಷರುಗಳು ಈ ಸಮಿತಿಯ ಪದನಿಮಿತ್ತ ಸದಸ್ಯರಾಗಿರುತ್ತಾರೆ. ಸಮಿತಿಯ ಪದನಿಮಿತ್ತ ಸದಸ್ಯರ ಸ್ಥಾನವು ತೆರವಾಗಿದ್ದ ಪಕ್ಷದಲ್ಲಿ, ಆ ಸ್ಥಾನವನ್ನು ಸಹ ನಾಮನಿರ್ದೇಶನದ ಮೂಲಕವೇ ನೇಮಕ ಮಾಡಲಾಗುವುದು. ಸಮಿತಿಯ ಒಟ್ಟು ಸದಸ್ಯ ಸಂಖ್ಯೆ ಎಂಟು. ಸಭೆಯ ಕನಿಷ್ಠ ಕೋರಂ ಐದು ಆಗಿರುತ್ತದೆ.

22. ರಂಗಭೂಮಿ ವಿಭಾಗ: ರಂಗಭೂಮಿ ವಿಭಾಗದ ಪ್ರಶಸ್ತಿ ಆಯ್ಕೆ ಸಮಿತಿಗೆ ಹಿರಿಯ ರಂಗಕರ್ಮಿಗಳನ್ನು ಆಯ್ಕೆ ಸಮಿತಿ ಅಧ್ಯಕ್ಷರನ್ನಾಗಿ ಆಯ್ಕೆ ಮಾಡಲಾಗುವುದು. ವೃತ್ತಿ ಮತ್ತು ಹವ್ಯಾಸಿ ರಂಗಭೂಮಿಯ ನಾಟಕ ನಿರ್ದೇಶನ, ನಾಟಕ ರಚನೆಕಾರ, ತಂತ್ರಜ್ಞ ಹೀಗೇ ವಿವಿಧ ಕ್ಷೇತ್ರಗಳ ನಾಲ್ಕು ಸದಸ್ಯರು ಮತ್ತು ಕರ್ನಾಟಕ ನಾಟಕ ಅಕಾಡೆಮಿ ಅಧ್ಯಕ್ಷರು, ರಂಗಾಯಣದ ಒಬ್ಬರು ನಿರ್ದೇಶಕರು ಪದನಿಮಿತ್ತ ಸದಸ್ಯರಾಗಿರುತ್ತಾರೆ. ಸಮಿತಿಯ ಪದನಿಮಿತ್ತ ಸದಸ್ಯರ ಸ್ಥಾನವು ತೆರವಾಗಿದ್ದ ಪಕ್ಷದಲ್ಲಿ, ಆ ಸ್ಥಾನವನ್ನು ಸಹ ನಾಮನಿರ್ದೇಶನದ ಮೂಲಕವೇ ನೇಮಕ ಮಾಡಲಾಗುವುದು. ಸಮಿತಿಯ ಒಟ್ಟು ಸದಸ್ಯ ಸಂಖ್ಯೆ ಎಂಟು. ಸಭೆಯ ಕನಿಷ್ಠ ಕೋರಂ ಐದು ಆಗಿರುತ್ತದೆ.

23. ಲಲಿತಕಲೆಗಳ ವಿಭಾಗ: ಲಲಿತಕಲೆಗಳ ಪ್ರಶಸ್ತಿ ಆಯ್ಕೆ ಸಮಿತಿಗೆ ಹಿರಿಯ ಚಿತ್ರ/ಶಿಲ್ಪ ಕಲಾವಿದರನ್ನು ಅಧ್ಯಕ್ಷರಾಗಿ ಆಯ್ಕೆ ಮಾಡಲಾಗುವುದು. ಚಿತ್ರಕಲೆ, ಶಿಲ್ಪಕಲೆ ಕ್ಷೇತ್ರಗಳ ಒಟ್ಟು ನಾಲ್ಕು ಕಲಾವಿದರು ಸದಸ್ಯರು ಸದಸ್ಯರಾಗಿರುತ್ತಾರೆ. ಕರ್ನಾಟಕ ಲಲಿತಕಲಾ ಅಕಾಡೆಮಿ ಮತ್ತು ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಅಧ್ಯಕ್ಷರುಗಳು ಪದನಿಮಿತ್ತ ಸದಸ್ಯರಾಗಿರುತ್ತಾರೆ. ಪದನಿಮಿತ್ತ ಸದಸ್ಯರ ಸ್ಥಾನವು ತೆರವಾಗಿದ್ದ ಪಕ್ಷದಲ್ಲಿ, ಆ ಸ್ಥಾನವನ್ನು ಸಹ ನಾಮನಿರ್ದೇಶನದ ಮೂಲಕವೇ ನೇಮಕ ಮಾಡಲಾಗುವುದು. ಸಮಿತಿಯ ಒಟ್ಟು ಸದಸ್ಯ ಸಂಖ್ಯೆ ಎಂಟು. ಸಭೆಯ ಕನಿಷ್ಠ ಕೋರಂ ಐದು ಆಗಿರುತ್ತದೆ.

27. ಪಂಪ ಪ್ರಶಸ್ತಿ ನಿಯಮಾವಳಿಗಳು

1. ಕನ್ನಡ ಸಾಹಿತ್ಯ ಲೋಕದಲ್ಲಿ ಆದಿಕವಿ ಎಂದೇ ಪರಿಗಣಿತನಾಗಿರುವ [illegible] ಪಂಪನ ಹೆಸರಿನಲ್ಲಿ ರಾಜ್ಯ ಮಟ್ಟದ ಪ್ರಶಸ್ತಿಯನ್ನು ಸ್ಥಾಪಿಸಲಾಗಿದೆ.
2. ಲೇಖಕರ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿನ ಒಟ್ಟಾರೆ ಸಾಹಿತ್ಯ ಕೃಷಿ, ಅವರ ಅನುಪಮ ಸಾಹಿತ್ಯ ಸೇವೆ ಮತ್ತು ಮಹತ್ತರ ಸಾಹಿತ್ಯ ಸಾಧನೆಯು ಈ ಪ್ರಶಸ್ತಿ ಪರಿಗಣನೆಗೆ ಮಾನದಂಡ ಆಗಿರುತ್ತದೆ.
3. ಕನ್ನಡ ಸೃಜನಶೀಲ ಮತ್ತು ಸೃಜನೇತರ ಪ್ರಕಾರಗಳಲ್ಲಿ ಅತ್ಯುತ್ತಮ ಸಾಧನೆ ಮಾಡಿರುವ ಮತ್ತು ಆ ಮೂಲಕ ಕನ್ನಡ ಸಾಹಿತ್ಯಕ್ಕೆ ಅಪೂರ್ವ ಕೊಡುಗೆ ಸಲ್ಲಿಸಿರುವ ಲೇಖಕರನ್ನು ಪ್ರಶಸ್ತಿಗಾಗಿ ಪರಿಗಣಿಸಬೇಕು. ಪ್ರಶಸ್ತಿಯನ್ನು ಆವರ್ತನದಲ್ಲಿ ಸೃಜನಶೀಲ ಮತ್ತು ಸೃಜನೇತರ ಪ್ರಕಾರಗಳ ಲೇಖಕರಿಗೆ ನೀಡಬೇಕು. ಯಾವುದೇ ಪ್ರಕಾರದ ಅರ್ಹ ಲೇಖಕರು ಲಭ್ಯವಿಲ್ಲದಿದ್ದಲ್ಲಿ, ಇನ್ನೊಂದು ಪ್ರಕಾರದ ಲೇಖಕರನ್ನು ಸಹ ಪರಿಗಣಿಸಬಹುದು.
4. ಸೃಜನಶೀಲ ಪ್ರಕಾರಗಳು ಎಂದರೆ ಕಾವ್ಯ, ನಾಟಕ, ಕಾದಂಬರಿ, ಸಣ್ಣಕಥೆ, ಜೀವನಚರಿತ್ರೆ, ಆತ್ಮಚರಿತ್ರೆ, ಪ್ರವಾಸ ಕಥನ, ಅಂಕಣ ಬರಹ, ಲಲಿತ ಪ್ರಬಂಧ, ಮತ್ತು ವ್ಯಕ್ತಿ ಚಿತ್ರ.
5. ಸೃಜನೇತರ ಪ್ರಕಾರಗಳು ಎಂದರೆ ಶುದ್ಧ ಹಾಗೂ ಅನ್ವಯಿಕ ವಿಜ್ಞಾನ, ಸಮಾಜವಿಜ್ಞಾನ, ಇತಿಹಾಸ, ಶಿಕ್ಷಣ, ಕಾನೂನು. ಮಾನವಿಕ ಶಾಸ್ತ್ರ, ಸಂಶೋಧನೆ, ಆಕರಸಾಹಿತ್ಯ, ಅಂಕಣ, ಸಾಹಿತ್ಯ ವಿಮರ್ಶೆ ಹಾಗೂ ಪರಾಮರ್ಶನ ಸಾಹಿತ್ಯ ಗ್ರಂಥಗಳು.
6. ಪಠ್ಯಪುಸ್ತಕ, ಸಂಶೋಧನಾ ಪ್ರಬಂಧ, ರೂಪಾಂತರಿತ ಪುಸ್ತಕಗಳ ಲೇಖಕರನ್ನು ಹಾಗೂ ಕೇವಲ ಸಹ ಲೇಖಕರನ್ನು ಪ್ರಶಸ್ತಿಗೆ ಪರಿಗಣಿಸಬಾರದು.

## 28. ದಾನ ಚಿಂತಾಮಣಿ ಅತ್ತಿಮಬ್ಬೆ ಪ್ರಶಸ್ತಿ ನಿಯಮಾವಳಿಗಳು

1. ಕನ್ನಡ ಸಾರಸ್ವತ ಲೋಕದ ಕವಿರತ್ನ ರನ್ನನಿಗೆ ಆಶ್ರಯವನಿತ್ತು, ಆತನ ಸಾಹಿತ್ಯ ಕೃಷಿಗೆ ಬೆನ್ನೆಲುಬಾದ ದಾನಚಿಂತಾಮಣಿ ಅತ್ತಿಮಬ್ಬೆಯ ಹೆಸರಿನಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಅನುಪಮ ಸಾಧನೆ ಮಾಡಿರುವ ಮಹಿಳಾ ಲೇಖಕಿಗೆ ಅವರ ಸಮಗ್ರ ಸಾಧನೆಯನ್ನು ಪರಿಗಣಿಸಿ ಈ ಪ್ರಶಸ್ತಿಯನ್ನು ನೀಡಲಾಗುವುದು.
2. ಕನ್ನಡದ ಮಹಿಳಾ ಸಾಹಿತಿಗಳ ಸೃಜನಶೀಲ ಮತ್ತು ಸೃಜನೇತರ ಸ್ವತಂತ್ರ ಕೃತಿಗಳು ಈ ಪ್ರಶಸ್ತಿಗಾಗಿ ಪರಿಗಣನೆಗೆ ಅರ್ಹವಾಗುತ್ತವೆ. ಪ್ರಶಸ್ತಿಯನ್ನು ಆವರ್ತನದಲ್ಲಿ ಸೃಜನಶೀಲ ಮತ್ತು ಸೃಜನೇತರ ಪ್ರಕಾರಗಳ ಲೇಖಕಿಯರಿಗೆ ನೀಡಬೇಕು. ಯಾವುದೇ ಪ್ರಕಾರದ ಅರ್ಹ ಲೇಖಕಿ ಲಭ್ಯವಿಲ್ಲದಿದ್ದಲ್ಲಿ, ಇನ್ನೊಂದು ಪ್ರಕಾರದ ಲೇಖಕಿಯನ್ನು ಸಹ ಪರಿಗಣಿಸಬಹುದು.
3. ಸೃಜನಶೀಲ ಪ್ರಕಾರಗಳು ಎಂದರೆ ಕಾವ್ಯ, ನಾಟಕ, ಕಾದಂಬರಿ, ಸಣ್ಣಕಥೆ, ಜೀವನಚರಿತ್ರೆ, ಆತ್ಮಚರಿತ್ರೆ, ಪ್ರವಾಸ ಕಥನ, ಅಂಕಣ ಬರಹ, ಲಲಿತ ಪ್ರಬಂಧ, ಮತ್ತು ವ್ಯಕ್ತಿ ಚಿತ್ರ.
4. ಸೃಜನೇತರ ಪ್ರಕಾರಗಳು ಎಂದರೆ ಶುದ್ಧ ಹಾಗೂ ಅನ್ವಯಿಕ ವಿಜ್ಞಾನ, ಸಮಾಜವಿಜ್ಞಾನ, ಇತಿಹಾಸ, ಶಿಕ್ಷಣ, ಕಾನೂನು, ಮಾನವಿಕ ಶಾಸ್ತ್ರ, ಸಂಶೋಧನೆ, ಆಕರಸಾಹಿತ್ಯ, ಅಂಕಣ, ಸಾಹಿತ್ಯ ವಿಮರ್ಶೆ ಹಾಗೂ ಪರಾಮರ್ಶನ ಸಾಹಿತ್ಯ ಗ್ರಂಥಗಳು.
5. ಪಠ್ಯಪುಸ್ತಕ, ಸಂಶೋಧನಾ ಪ್ರಬಂಧ, ರೂಪಾಂತರಿತ ಪುಸ್ತಕಗಳ ಲೇಖಕರನ್ನು ಹಾಗೂ ಕೇವಲ ಸಹಲೇಖಕರನ್ನು ಪ್ರಶಸ್ತಿಗೆ ಪರಿಗಣಿಸಬಾರದು.

## 29. ಪ್ರೊ॥ ಕೆ.ಜಿ.ಕುಂದಣಗಾರ ಗಡಿನಾಡು ಸಾಹಿತ್ಯ ಪ್ರಶಸ್ತಿ

1. ಕನ್ನಡ ನಾಡು ಭಾಷಿಕ ಪ್ರಾಂತ್ಯವಾಗಿ ರಚನೆಯಾದಾಗ ರಾಜ್ಯದ ಗಡಿಭಾಗಗಳ ಪರಿಸರದಲ್ಲಿ ಪರಭಾಷೆಯ ಪ್ರಭಾವ ಮತ್ತು ಒತ್ತಡಗಳ ನಡುವೆ ಸಹ ಕನ್ನಡ ನಾಡು–ನುಡಿಯನ್ನು ಉಳಿಸಿ ಬೆಳೆಸಲು ಅವಿರತ ಶ್ರಮಿಸಿದ ಪ್ರೊ॥ ಕೆ.ಜಿ.ಕುಂದಣಗಾರ ಅವರ ಅನುಪಮ ಸೇವೆಯನ್ನು ಗೌರವಿಸಿ ಈ ಪ್ರಶಸ್ತಿಯನ್ನು ಸ್ಥಾಪಿಸಲಾಗಿದೆ.
2. ಕರ್ನಾಟಕದ ಗಡಿಭಾಗದಲ್ಲಿ ಸಾಹಿತ್ಯ/ಸಂಶೋಧನೆಗೆ ಅನುಪಮ ಸೇವೆ ಸಲ್ಲಿಸಿದ ಸಾಹಿತಿ ಮತ್ತು ಸಂಶೋಧಕರನ್ನು ಆವರ್ತನದಲ್ಲಿ ಆಯ್ಕೆ ಮಾಡುವುದು. ಒಂದು ಪಕ್ಷ ಆಯಾ ವರ್ಷದ ವಿಷಯಕ್ಷೇತ್ರದಲ್ಲಿ ಅರ್ಹ ಸಾಧಕರು ದೊರೆಯದಿದ್ದ ಪಕ್ಷದಲ್ಲಿ ಇನ್ನೊಂದು ವಿಷಯ ಕ್ಷೇತ್ರದ ಸಾಧಕರನ್ನು ಗುರುತಿಸಿ ಆಯ್ಕೆ ಮಾಡಬಹುದು.
3. ಪಠ್ಯಪುಸ್ತಕ, ಸಂಶೋಧನಾ ಪ್ರಬಂಧ, ರೂಪಾಂತರಿತ ಪುಸ್ತಕಗಳ ಲೇಖಕರನ್ನು ಹಾಗೂ ಕೇವಲ ಸಹಲೇಖಕರನ್ನು ಪ್ರಶಸ್ತಿಗೆ ಪರಿಗಣಿಸಬಾರದು.

...6/-

24. ಆಯ್ಕೆ ಸಮಿತಿಯ ಸದಸ್ಯರಿಗೆ ರೂ.1,000/-ಗಳ ಸಭಾಭತ್ಯೆ ಹಾಗೂ ಸ್ಥಳೀಯ ಪ್ರಯಾಣ ಭತ್ಯೆ ರೂ.500/-ಗಳನ್ನು ನೀಡುವುದು. ಹೊರಪ್ರದೇಶಗಳಿಂದ ಆಗಮಿಸುವ ಅಧ್ಯಕ್ಷರು/ಸದಸ್ಯರಿಗೆ ಹವಾನಿಯಂತ್ರಿತ ಎರಡನೆ ದರ್ಜೆ ರೈಲು ಪ್ರಯಾಣ ಭತ್ಯೆ/ವೋಲ್ವೋ ಬಸ್ ಪ್ರಯಾಣ ದರವನ್ನು ನೀಡಲಾಗುವುದು ಮತ್ತು ವಸತಿ, ಊಟ–ಉಪಾಹಾರದ ವ್ಯವಸ್ಥೆ ಮಾಡುವುದು.

25. ಪ್ರಶಸ್ತಿ ಪುರಸ್ಕೃತರಿಗೆ ಪ್ರಶಸ್ತಿಯ ಸ್ಮರಣಿಕೆ, ಪ್ರಶಸ್ತಿಫಲಕ, ಶಾಲು, ಹಾರ, ಫಲ–ತಾಂಬೂಲದೊಂದಿಗೆ ಈ ಕೆಳಕಂಡಂತೆ ಆಯಾ ಪ್ರಶಸ್ತಿಗೆ ನಿಗದಿ ಮಾಡಿರುವ ಗೌರವಧನದ ಮೊತ್ತವನ್ನು ಪುರಸ್ಕೃತರಿಗೆ ನೀಡಲಾಗುವುದು.

26. ಪ್ರಶಸ್ತಿ ಮೊತ್ತದ ವಿವರಗಳು ಈ ಕೆಳಗಿನ ಕೋಷ್ಟಕದಂತಿವೆ.

| ಕ್ರಸಂ | ಪ್ರಶಸ್ತಿಯ ಹೆಸರು | ಪ್ರಶಸ್ತಿ ಮೊತ್ತ ರೂ. ಲಕ್ಷಗಳಲ್ಲಿ |
|---|---|---|
| 1 | ಬಸವ ಪುರಸ್ಕಾರ ರಾಷ್ಟ್ರೀಯ ಪ್ರಶಸ್ತಿ | 10.00 |
| 2 | ಪಂಪ ಪ್ರಶಸ್ತಿ | 3.00 |
| 3 | ದಾನಚಿಂತಾಮಣಿ ಅತ್ತಿಮಬ್ಬೆ ಪ್ರಶಸ್ತಿ | 3.00 |
| 4 | ಕನಕ ಶ್ರೀ ಪ್ರಶಸ್ತಿ | 5.00 |
| 5 | ಪ್ರೊ॥ ಕೆ.ಜಿ.ಕುಂದಣಗಾರ ಗಡಿನಾಡ ಸಾಹಿತ್ಯ ಪ್ರಶಸ್ತಿ | 3.00 |
| 6 | ಸಂಗೊಳ್ಳಿ ರಾಯಣ್ಣ ಪ್ರಶಸ್ತಿ | 3.00 |
| 7 | ಟಿ.ಚೌಡಯ್ಯ ರಾಷ್ಟ್ರೀಯ ಪುರಸ್ಕಾರ | 5.00 |
| 8 | ಶ್ರೀ ನಿಜಗುಣ–ಪುರಂದರ ಪ್ರಶಸ್ತಿ | 3.00 |
| 9 | ಸಂತ ಶಿಶುನಾಳ ಷರೀಫ ಪ್ರಶಸ್ತಿ | 3.00 |
| 10 | ಕುಮಾರವ್ಯಾಸ ಪ್ರಶಸ್ತಿ | 3.00 |
| 11 | ಶಾಂತಲಾ ನಾಟ್ಯರಾಣಿ ಪ್ರಶಸ್ತಿ | 3.00 |
| 12 | ರಾಜ್ಯ ಸಂಗೀತ ವಿದ್ವಾನ್ ಪ್ರಶಸ್ತಿ | 3.00 |
| 13 | ಜಾನಪದ ಶ್ರೀ ಪ್ರಶಸ್ತಿ | 3.00 |
| 14 | ಡಾ॥ ಗುಬ್ಬಿ ವೀರಣ್ಣ ಪ್ರಶಸ್ತಿ | 3.00 |
| 15 | ಬಿ.ವಿ.ಕಾರಂತ ಪ್ರಶಸ್ತಿ | 3.00 |
| 16 | ವರ್ಣಶಿಲ್ಪಿ ವೆಂಕಟಪ್ಪ ಪ್ರಶಸ್ತಿ | 3.00 |
| 17 | ಜಕಣಾಚಾರಿ ಪ್ರಶಸ್ತಿ | 3.00 |

## 33. ಟಿ.ಚೌಡಯ್ಯ ರಾಷ್ಟ್ರೀಯ ಪ್ರಶಸ್ತಿ ನಿಯಮಾವಳಿಗಳು

1. ಕರ್ನಾಟಕದ ಹಿರಿಯ ಕಲಾವಿದ, ಮೈಸೂರು ಸಂಸ್ಥಾನದ ಪಿಟೀಲು ವಾದನದ ಮಾಂತ್ರಿಕ ಕಲಾವಿದ ಟಿ.ಚೌಡಯ್ಯ ಅವರ ಹೆಸರಿನಲ್ಲಿ 'ಟಿ.ಚೌಡಯ್ಯ ಪ್ರಶಸ್ತಿ' ರಾಷ್ಟ್ರೀಯ ಪುರಸ್ಕಾರವನ್ನು ಸ್ಥಾಪಿಸಲಾಗಿದೆ.
2. ಈ ಪ್ರಶಸ್ತಿಯು ರಾಷ್ಟ್ರ ಮಟ್ಟದ್ದಾಗಿದ್ದು , ಕರ್ನಾಟಕ ಮತ್ತು ಹಿಂದೂಸ್ಥಾನಿ ಶಾಸ್ತ್ರೀಯ ಸಂಗೀತ ಕ್ಷೇತ್ರಗಳ ವಾದ್ಯ ಸಂಗೀತ ಕಲಾವಿದರಿಗೆ, ಅವರು ಸಂಗೀತ ಕ್ಷೇತ್ರದಲ್ಲಿ ನೀಡಿರುವ ಅನುಪಮ ಸಾಧನೆಯನ್ನು ಪರಿಗಣಿಸಿ ಈ ಪ್ರಶಸ್ತಿ ನೀಡಲಾಗುವುದು.
3. ಈ ಪ್ರಶಸ್ತಿಯನ್ನು ಎರಡು ವರ್ಷ ರಾಜ್ಯದ ಕಲಾವಿದರಿಗೆ ಮತ್ತು ಎರಡು ವರ್ಷ ಹೊರರಾಜ್ಯಗಳ ಕಲಾವಿದರಿಗೆ ನೀಡಿ ಪುರಸ್ಕರಿಸಲಾಗುವುದು.
4. ಈ ಪ್ರಶಸ್ತಿಗೆ ಪರಿಗಣಿಸಲಾಗುವ ಸಂಗೀತ ವಾದ್ಯ ಕಲಾವಿದರು:–

   **ಕರ್ನಾಟಕ ವಾದ್ಯ ಸಂಗೀತ**– ವೀಣೆ, ಪಿಟೀಲು, ಕೊಳಲು, ನಾದಸ್ವರ, ಡೋಲು, ಗೋಟು ವಾದ್ಯ, ಘಟಂ, ಮೃದಂಗ, ಖಂಜಿರಾ, ಸ್ಯಾಕ್ಸಾಫೋನ್, ಮೋರ್ಚಿಂಗ್, ಮ್ಯಾಂಡೋಲಿನ್.

   **ಹಿಂದೂಸ್ಥಾನಿ ವಾದ್ಯ ಸಂಗೀತ**– ಸಿತಾರ್, ಸರೋದ್, ಬಾನ್ಸುರಿ, ಸಾರಂಗಿ, ತಬಲ, ಹಾರ್ಮೋನಿಯಂ, ಪಖವಾಜ್, ಬೀನ್, ಕ್ಲಾರಿಯೋನೆಟ್, ಷಹನಾಯಿ,

   ಹಾಗೂ ಆಯ್ಕೆ ಸಮಿತಿಯು ಸರ್ವ ಸಮ್ಮತವಾಗಿ ಅರ್ಹವೆಂದು ಪರಿಗಣಿಸುವ ಇತರೆ ವಾದ್ಯ ಸಂಗೀತಗಾರರು.

---

## 34. ಶ್ರೀ ನಿಜಗುಣ–ಪುರಂದರ ಪ್ರಶಸ್ತಿ ನಿಯಮಾವಳಿಗಳು

1. ಕರ್ನಾಟಕ ಸಾಂಸ್ಕೃತಿಕ ಲೋಕದ ಇತಿಹಾಸದಲ್ಲಿ ಚಿರಸ್ಥಾಯಿಯಾಗಿರುವ ಶ್ರೀ ನಿಜಗುಣ ಶಿವಯೋಗಿಗಳು ಹಾಗೂ ಶ್ರೀ ಪುರಂದರದಾಸರಿಗೆ ಮಹತ್ವದ ಸ್ಥಾನವಿದೆ. ಈ ಶರಣ–ದಾಸ ಶ್ರೇಷ್ಠರ ಸಂಗೀತ–ಸಂಸ್ಕೃತಿ ಕ್ಷೇತ್ರಗಳ ಅನನ್ಯ ಸಾಧನೆಯ ಹೆಗ್ಗುರುತಾಗಿ ಈ ಪ್ರಶಸ್ತಿಯನ್ನು ಸ್ಥಾಪಿಸಲಾಗಿದೆ.
2. ಕರ್ನಾಟಕದ ಪ್ರತಿಭಾವಂತ ಕರ್ನಾಟಕ ಶಾಸ್ತ್ರೀಯ ಸಂಗೀತ, ಹಿಂದೂಸ್ಥಾನಿ ಶಾಸ್ತ್ರೀಯ ಸಂಗೀತ ಕ್ಷೇತ್ರಗಳ ಗಾಯಕರು ಹಾಗೂ ವಾದ್ಯ ಸಂಗೀತಗಾರರನ್ನು ಈ ಪ್ರಶಸ್ತಿಗೆ ಆವರ್ತನ ಕ್ರಮದಲ್ಲಿ ಪರಿಗಣಿಸಲಾಗುವುದು. ಒಂದೊಮ್ಮೆ ಸಂಬಂಧಿತ ಪ್ರಕಾರದಲ್ಲಿ ಅರ್ಹ ಕಲಾವಿದರು ಲಭ್ಯರಿಲ್ಲದಿದ್ದಲ್ಲಿ ಇನ್ನೊಂದು ಪ್ರಕಾರದ ಕಲಾವಿದರನ್ನು ಪ್ರಶಸ್ತಿಗೆ ಆಯ್ಕೆ ಮಾಡಬಹುದು.

---

## 35. ಸಂತ ಶಿಶುನಾಳ ಷರೀಫ ಪ್ರಶಸ್ತಿ ನಿಯಮಾವಳಿಗಳು

1. ಸಂತ ಶಿಶುನಾಳ ಷರೀಫ್ ಕನ್ನಡ ಸಾಹಿತ್ಯ ಲೋಕದ ಹೆಮ್ಮೆಯ ಸಂತ ಕವಿ. ಈ ಹಿರಿಯ ಸಂತ ಕವಿಯ ಹೆಸರಿನಲ್ಲಿ ಅನುಪಮ ಸಾಧನೆ ಮಾಡಿರುವ ಸುಗಮ ಸಂಗೀತಗಾರರಿಗೆ 'ಸಂತ ಶಿಶುನಾಳ ಷರೀಫ್ ಪ್ರಶಸ್ತಿ' ನೀಡಲಾಗುವುದು.
2. ಸುಗಮಸಂಗೀತ ಕ್ಷೇತ್ರದಲ್ಲಿ ಅನುಪಮ ಸೇವೆ ಸಲ್ಲಿಸಿ ವಿಖ್ಯಾತರಾದ ಗಾಯಕರು ಮತ್ತು ಸ್ವರ ಸಂಯೋಜಕರಿಗೆ ಈ ಪ್ರಶಸ್ತಿಯನ್ನು ನೀಡಲಾಗುವುದು.

## 30. ಕನಕ ಶ್ರೀ ಪ್ರಶಸ್ತಿ ನಿಯಮಾವಳಿಗಳು

1. ಕರ್ನಾಟಕ ಸಾಹಿತ್ಯ ಮತ್ತು ಸಾಂಸ್ಕೃತಿ ಕ್ಷೇತ್ರದಲ್ಲಿ ಹದಿನಾರನೆಯ ಶತಮಾನದಲ್ಲಿ ನಡೆದ ದೊಡ್ಡ ಸಾಮಾಜಿಕ ಕ್ರಾಂತಿಯ ಅಧ್ವರ್ಯುಗಳಲ್ಲಿ ಪ್ರಮುಖರಾದ ಕನಕದಾಸರು ದಾಸಶ್ರೇಷ್ಠರೆಂದೇ ಪರಿಗಣಿತರಾದವರು. ಈ ದಾಸ ಶ್ರೇಷ್ಠರ ಹೆಸರಿನಲ್ಲಿ ಸ್ಥಾಪಿತವಾದ ಪ್ರಶಸ್ತಿಯನ್ನು ಕನಕಶ್ರೀ ಪ್ರಶಸ್ತಿ ಎಂದು ಕರೆಯಲಾಗುವುದು.
2. ಕನಕದಾಸರು ಪ್ರತಿಪಾದಿಸಿದ ಮೌಲ್ಯಗಳು, ಸಾಹಿತ್ಯ ಸಂದೇಶಗಳು, ದಾರ್ಶನಿಕ ಕೊಡುಗೆಗಳನ್ನು ಸಮರ್ಥವಾಗಿ ಪ್ರತಿಪಾದಿಸುವ ಸಂಶೋಧಕರಿಗೆ ಹಾಗೂ ದಾಸಸಾಹಿತ್ಯ ಕ್ಷೇತ್ರದಲ್ಲಿ ಅನುಪಮ ಸೇವೆ ಸಲ್ಲಿಸಿದ ವಿದ್ವಾಂಸರಿಗೆ ಈ ಪ್ರಶಸ್ತಿಯನ್ನು ಆವರ್ತನ ಕ್ರಮದಲ್ಲಿ ನೀಡಲಾಗುವುದು.
3. ಈ ಪ್ರಶಸ್ತಿಗೆ ವಿಷಯಕ್ಷೇತ್ರದ ಅರ್ಹ ಸಂಶೋಧಕರು ಮತ್ತು ವಿದ್ವಾಂಸರು ದೊರೆಯದಿದ್ದ ಪಕ್ಷದಲ್ಲಿ ಇನ್ನೊಂದು ವಿಷಯ ಕ್ಷೇತ್ರದ ಸಾಧಕರನ್ನು ಗುರುತಿಸಿ ಆಯ್ಕೆ ಮಾಡಬಹುದು.

---

## 31. ಬಸವ ರಾಷ್ಟ್ರೀಯ ಪುರಸ್ಕಾರ ನಿಯಮಾವಳಿಗಳು

1. ಮಹಾ ಮಾನವತಾವಾದಿ, ಸಮಾಜ ಸುಧಾರಕ, ಪರಿವರ್ತನೆಯ ಪ್ರವರ್ತಕ, ಕನ್ನಡ ಸಾಹಿತ್ಯ ಮತ್ತು ಸಾಂಸ್ಕೃತಿಕ ಲೋಕ ಕಂಡ ಹನ್ನೆರಡನೆಯ ಶತಮಾನದ ಕಲ್ಯಾಣದ ಕ್ರಾಂತಿಯ ಕಾರಣ ಪುರುಷ, ಸಾಮಾಜಿಕ ಸಾಮರಸ್ಯಕ್ಕಾಗಿ ಶ್ರಮಿಸಿದ, ಶೋಷಿತ ಮತ್ತು ದಮನಿತ ವರ್ಗಗಳಲ್ಲಿ ಆತ್ಮ ವಿಶ್ವಾಸವನ್ನು ವರ್ಧಿಸಿದ ಜಗಜ್ಯೋತಿ ಬಸವೇಶ್ವರರ ಸ್ಮರಣಾರ್ಥ ಅವರ ಹೆಸರಿನಲ್ಲಿ 'ಬಸವ ಪುರಸ್ಕಾರ' ರಾಷ್ಟ್ರೀಯ ಪ್ರಶಸ್ತಿಯನ್ನು ನೀಡಲಾಗುತ್ತದೆ.
2. ಈ ಪ್ರಶಸ್ತಿಯು ರಾಷ್ಟ್ರ ಮಟ್ಟದ ಪ್ರಶಸ್ತಿ ಆಗಿದ್ದು, ಜಗಜ್ಯೋತಿ ಬಸವೇಶ್ವರರು ಪ್ರತಿಪಾದಿಸಿದ ಸಿದ್ಧಾಂತ, ಶರಣ ಸಂಸ್ಕೃತಿ, ಸಾಹಿತ್ಯ ಕ್ಷೇತ್ರಗಳಲ್ಲಿ ಅನನ್ಯ ಸಾಧನೆಗೈದಿರುವ, ಸಾಮಾಜಿಕ ನ್ಯಾಯ ಮತ್ತು ಸಾಮರಸ್ಯಕ್ಕಾಗಿ ನೇರ ಮತ್ತು ನಿರಂತರವಾಗಿ ಭಾರತದ ಯಾವುದೇ ಪ್ರದೇಶದಲ್ಲಿ ಅನುಪಮ ಸೇವೆ ಸಲ್ಲಿಸುತ್ತಿರುವ ವಿಶಿಷ್ಟ ವ್ಯಕ್ತಿ ಮತ್ತು ಸಂಸ್ಥೆಗಳನ್ನು ಈ ಪ್ರಶಸ್ತಿಗೆ ಪರಿಗಣಿಸಲಾಗುವುದು.
3. ಒಂದು ವರ್ಷ ರಾಜ್ಯದಲ್ಲಿರುವ ವ್ಯಕ್ತಿ/ಸಂಸ್ಥೆಗಳನ್ನು ಮತ್ತು ನಂತರದ ಎರಡು ವರ್ಷ ರಾಷ್ಟ್ರದ ಯಾವುದೇ ಹೊರರಾಜ್ಯದ ವ್ಯಕ್ತಿ/ಸಂಸ್ಥೆಗಳನ್ನು ಪ್ರತಿ ಆವರ್ತನದಲ್ಲಿ ಪರಿಗಣಿಸಬೇಕು. ಈ ಪ್ರಶಸ್ತಿಗೆ ಕನಿಷ್ಠ 50 ವರ್ಷಗಳ ಸೇವೆ ಸಲ್ಲಿಸಿದ ಸಂಸ್ಥೆಗಳು, ಮತ್ತು ಕನಿಷ್ಠ 50 ವರ್ಷ ಮೇಲ್ಪಟ್ಟ ವಯೋಮಾನದ ಸಾಧಕರನ್ನಷ್ಟೆ ಪರಿಗಣಿಸಲಾಗುವುದು. ಒಂದೊಮ್ಮೆ ಅರ್ಹ ವ್ಯಕ್ತಿ/ಸಂಸ್ಥೆಗಳು ಲಭ್ಯರಿಲ್ಲದಿದ್ದಲ್ಲಿ ಆ ವರ್ಷದ ಪ್ರಶಸ್ತಿಗೆ ಆವರ್ತನದ ಇನ್ನೊಂದು ಕ್ಷೇತ್ರವನ್ನು ಪರಿಗಣಿಸುವಂತಿಲ್ಲ.

---

## 32. ಸಂಗೊಳ್ಳಿ ರಾಯಣ್ಣ ಪ್ರಶಸ್ತಿ ನಿಯಮಾವಳಿಗಳು

4. ಕನ್ನಡ ನಾಡಿನ ನೆಲ-ಜಲ, ಭಾಷೆ-ಸಂಸ್ಕೃತಿಯ ಸಂರಕ್ಷಣೆಗಾಗಿ ತನ್ನ ಪ್ರಾಣವನ್ನೇ ಬಲಿಗೊಟ್ಟ ಕನ್ನಡ ನಾಡಿನ ಕಿತ್ತೂರು ಸಂಸ್ಥಾನದ ನಿಸ್ವಾರ್ಥಿ ಹೋರಾಟಗಾರ ಸಂಗೊಳ್ಳಿ ರಾಯಣ್ಣ ಅವರ ಹೆಸರಿನಲ್ಲಿ ಈ ಪ್ರಶಸ್ತಿಯನ್ನು ಸ್ಥಾಪಿಸಲಾಗಿದೆ.
5. ಕನ್ನಡ ನಾಡಿನ ನೆಲ-ಜಲ, ಭಾಷೆ-ಸಂಸ್ಕೃತಿಯ ಸಂರಕ್ಷಣೆಮತ್ತು ಸಂವರ್ಧನೆಗಾಗಿ ಶ್ರಮಿಸುವ ಸಾಧಕರನ್ನು ಈ ಪ್ರಶಸ್ತಿ ನೀಡಿ ಪುರಸ್ಕರಿಸಲಾಗುವುದು.

## 36. ಕುಮಾರವ್ಯಾಸ ಪ್ರಶಸ್ತಿ ನಿಯಮಾವಳಿಗಳು

1. ಕನ್ನಡದ ಸಾಹಿತ್ಯ ಲೋಕದಲ್ಲಿ ಕುಮಾರವ್ಯಾಸ 'ಗದುಗಿನ ಭಾರತ' ಚಿರಸ್ಥಾಯಿಯಾದ ಕೃತಿ. ಈ ಶ್ರೇಷ್ಠಕವಿಯ ಹೆಸರಿನಲ್ಲಿ ಗಮಕ ಮತ್ತು ಕಥಾ ಕೀರ್ತನ ಕ್ಷೇತ್ರಗಳಲ್ಲಿ ಅನುಪಮ ಸಾಧನೆಗೈದಿರುವ ಹಿರಿಯ ಸಾಧಕರನ್ನು 'ಕುಮಾರವ್ಯಾಸ ಪ್ರಶಸ್ತಿ' ನೀಡಿ ಗೌರವಿಸಲಾಗುವುದು.
2. ಗಮಕ ವಾಚನ ಮತ್ತು ವ್ಯಾಖ್ಯಾನ ಹಾಗೂ ಕಥಾ ಕೀರ್ತನ ಕ್ಷೇತ್ರಗಳ ಸಾಧಕರಿಗೆ ಆವರ್ತನ ಕ್ರಮದಲ್ಲಿ ಪ್ರಶಸ್ತಿ ನೀಡಲಾಗುವುದು. ಒಂದೊಮ್ಮೆ ಸಂಬಂಧಿತ ಪ್ರಕಾರದಲ್ಲಿ ಅರ್ಹ ಕಲಾವಿದರು ಲಭ್ಯರಿಲ್ಲದಿದ್ದಲ್ಲಿ ಇನ್ನೊಂದು ಪ್ರಕಾರದ ಕಲಾವಿದರನ್ನು ಪ್ರಶಸ್ತಿಗೆ ಆಯ್ಕೆ ಮಾಡಬಹುದು.

---

## 37. ಶಾಂತಲಾ ನಾಟ್ಯ ಪ್ರಶಸ್ತಿ ನಿಯಮಾವಳಿಗಳು

1. ಕನ್ನಡ ನಾಡಿನ ಪ್ರತಿಷ್ಠಿತ ಹೊಯ್ಸಳ ಸಾಮ್ರಾಜ್ಞಿ, ಕನ್ನಡ ನಾಡಿನ ಶಿಲ್ಪವೈಭವಗಳಾದ ಬೇಲೂರಿನ ನೃತ್ಯಶಿಲ್ಪಗಳ ರೂಪದರ್ಶಿ ನಾಟ್ಯರಾಣಿ ಶಾಂತಲಾ ಹೆಸರನ್ನು ಚಿರಸ್ಥಾಯಿಯಾಗಿಸಲು ಶಾಸ್ತ್ರೀಯ ನೃತ್ಯ ಕ್ಷೇತ್ರದಲ್ಲಿ ಅನುಪಮ ಸಾಧನೆ ಮಾಡಿರುವ ಸಾಧಕರಿಗೆ 'ಶಾಂತಲಾ ನಾಟ್ಯ ಪ್ರಶಸ್ತಿ' ನೀಡಿ ಗೌರವಿಸಲಾಗುತ್ತಿದೆ.
2. ಈ ಪ್ರಶಸ್ತಿಗೆ ಭರತನಾಟ್ಯ, ಕಥಕ್, ಕೂಚುಪುಡಿ, ಒಡಿಸ್ಸಿ, ಮೋಹಿನಿಯಾಟ್ಟಂ ಮತ್ತಿತರ ಪ್ರಕಾರಗಳಲ್ಲಿ ಅರ್ಹ ನೃತ್ಯ ಕಲಾವಿದರನ್ನು ಪರಿಗಣಿಸಲಾಗುವುದು.

---

## 38. ರಾಜ್ಯ ಸಂಗೀತ ವಿದ್ವಾನ್ ಪ್ರಶಸ್ತಿ ನಿಯಮಾವಳಿಗಳು

1. ಚಾರಿತ್ರಿಕ ಮೈಸೂರು ದಸರಾ ಉತ್ಸವ ಸಂದರ್ಭದಲ್ಲಿ ರಾಜ್ಯದ ಹಿರಿಯ ಸಂಗೀತಗಾರರನ್ನು 'ರಾಜ್ಯ ಸಂಗೀತ ವಿದ್ವಾನ್', ಎಂದು ಅಭಿದಾನವನ್ನಿತ್ತು ಪುರಸ್ಕರಿಸಲಾಗುವುದು.
2. ರಾಜ್ಯ ಸಂಗೀತ ವಿದ್ವಾನ್ ಪ್ರಶಸ್ತಿಗೆ ಕರ್ನಾಟಕ ಶಾಸ್ತ್ರೀಯ ಸಂಗೀತ ಮತ್ತು ಹಿಂದೂಸ್ಥಾನಿ ಶಾಸ್ತ್ರೀಯ ಸಂಗೀತ ಕ್ಷೇತ್ರಗಳ ವಾದ್ಯ ಸಂಗೀತ ಮತ್ತು ಗಾಯನ ಕ್ಷೇತ್ರಗಳಲ್ಲಿ ಸುದೀರ್ಘವಾದ ಅನುಪಮ ಸೇವೆ ಹಾಗೂ ಅನನ್ಯ ಸಾಧನೆ ಮಾಡಿರುವ ಹಿರಿಯ ಸಂಗೀತಗಾರರನ್ನು ಈ ಪ್ರಶಸ್ತಿಗೆ ಆಯ್ಕೆ ಮಾಡಲಾಗುವುದು.
3. ಪ್ರಶಸ್ತಿಗೆ ಆಯ್ಕೆಯಾದ ಸಂಗೀತಗಾರರನ್ನು ಆ ವರ್ಷದಲ್ಲಿ ಸರ್ಕಾರದ ಅತಿಥಿ ಎಂದು ಗೌರವಿಸಲಾಗುವುದು. ಸರ್ಕಾರವು ನಡೆಸುವ ವಿಶೇಷ ಸಾಂಸ್ಕೃತಿಕ ಉತ್ಸವಗಳಲ್ಲಿ ಅವರು ಪ್ರತಿಷ್ಠಿತ ಆಹ್ವಾನಿತರಾಗಿರುತ್ತಾರೆ.
4. ಪ್ರಶಸ್ತಿಗೆ ಆಯ್ಕೆಯಾದ ಸಂಗೀತಗಾರರು ಆ ವರ್ಷದಲ್ಲಿ ಸರ್ಕಾರಕ್ಕೆ ಸಂಗೀತ ಸಲಹೆಗಾರರಾಗಿರುತ್ತಾರೆ.

---

## 39. ಜಾನಪದ ಶ್ರೀ ಪ್ರಶಸ್ತಿ ನಿಯಮಾವಳಿಗಳು

1. ನಾಡಿನ ಮೌಖಿಕ ಪರಂಪರೆ ಮತ್ತು ಸಾಂಸ್ಕೃತಿಕ ವೈಭವಗಳ ಉಗಮ ಜನಪದ ಪರಂಪರೆ. ಈ ಜನಪದ ಪರಂಪರೆಯು ನಿರಂತರವಾಗಿ ಜನಪದರಲ್ಲಿ ಹಾಸುಹೊಕ್ಕಾಗಿ ನಾಡಿನ ಸಾಂಸ್ಕೃತಿಕ ಸಿರಿಯನ್ನು ವಿಸ್ತರಿಸುತ್ತಿದೆ. ಜಾನಪದ ಕ್ಷೇತ್ರದಲ್ಲಿ ಸಾಧನೆ ಮಾಡಿರುವ ಮೂಲ ಜನಪದ ಕಲಾವಿದರನ್ನು ಗುರುತಿಸಿ "ಜಾನಪದ ಶ್ರೀ" ಪ್ರಶಸ್ತಿ ನೀಡಿ ಗೌರವಿಸಲಾಗುವುದು.
2. ಈ ಪ್ರಶಸ್ತಿಗೆ ವಿದ್ವಾಂಸರು, ಸಂಶೋಧಕರು, ಜನಪದ ಕ್ಷೇತ್ರಗಳ ಕಾರ್ಯಕರ್ತರನ್ನು ಪರಿಗಣಿಸುವುದಿಲ್ಲ. ಕೇವಲ ಜನಪದ ಕಲಾವಿದರು ಅಂದರೆ, ಜನಪದ ವಾದನ, ಜನಪದ ಗಾಯನ, ಜನಪದ ನೃತ್ಯ, ಯಕ್ಷಗಾನದ ಪ್ರಕಾರಗಳ ಕಲಾವಿದರನ್ನು ಮಾತ್ರ ಆವರ್ತನ ಪದ್ಧತಿಯಲ್ಲಿ ಪರಿಗಣಿಸಲಾಗುವುದು. ಒಂದೊಮ್ಮೆ ಸಂಬಂಧಿತ ಪ್ರಕಾರದಲ್ಲಿ ಅರ್ಹ ಕಲಾವಿದರು ಲಭ್ಯರಿಲ್ಲದಿದ್ದಲ್ಲಿ ಇನ್ನೊಂದು ಪ್ರಕಾರದ ಕಲಾವಿದರನ್ನು ಪ್ರಶಸ್ತಿಗೆ ಆಯ್ಕೆ ಮಾಡಬಹುದು.

...9/-

40. ಡಾ|| ಗುಬ್ಬಿ ವೀರಣ್ಣ ಪ್ರಶಸ್ತಿ ನಿಯಮಾವಳಿಗಳು

1. ಕನ್ನಡ ರಂಗಭೂಮಿಯ ಮೇರು ಕಲಾವಿದ, ಗುಬ್ಬಿ ಕಂಪೆನಿಯ ಸ್ಥಾಪಕರಾದ ಗುಬ್ಬಿ ವೀರಣ್ಣನವರ ಹೆಸರಿನಲ್ಲಿ ವೃತ್ತಿ ರಂಗಭೂಮಿಯ ಹಿರಿಯ ಕಲಾವಿದರಿಗೆ 'ಡಾ|| ಗುಬ್ಬಿ ವೀರಣ್ಣ ಪ್ರಶಸ್ತಿ' ನೀಡಲಾಗುವುದು.
2. ಈ ಪ್ರಶಸ್ತಿಗೆ ವೃತ್ತಿ ರಂಗಭೂಮಿಯ ನಟ-ನಟಿಯರು, ನಿರ್ದೇಶಕರು, ತಂತ್ರಜ್ಞರು, ಸಂಗೀತಜ್ಞರನ್ನು ಅವರ ಜೀವಮಾನದ ಸೇವೆಯನ್ನು ಪರಿಗಣಿಸಿ ಪ್ರಶಸ್ತಿ ನೀಡಲಾಗುವುದು.

---

## 41. ಬಿ.ವಿ.ಕಾರಂತ ಪ್ರಶಸ್ತಿ ನಿಯಮಾವಳಿಗಳು

1. ಕನ್ನಡ ನಾಡಿನ ಹವ್ಯಾಸಿ ರಂಗಭೂಮಿಯ ರೆಪರ್ಟರಿ ಪರಿಕಲ್ಪನೆಯನ್ನು ಹವ್ಯಾಸಿ ರಂಗಭೂಮಿಯಲ್ಲಿ ಪುನರುಜ್ಜೀವಿಸಿದ ಹಿರಿಯ ರಂಗಕರ್ಮಿ ಬಿ.ವಿ.ಕಾರಂತರ ಹೆಸರಿನಲ್ಲಿ ಹವ್ಯಾಸಿ ರಂಗಭೂಮಿ ಕ್ಷೇತ್ರದಲ್ಲಿ ಅನನ್ಯ ಸಾಧನೆ ಮಾಡಿದ ಕಲಾವಿದರನ್ನು 'ಬಿ.ವಿ.ಕಾರಂತ್ ಪ್ರಶಸ್ತಿ' ನೀಡಿ ಗೌರವಿಸಲಾಗುವುದು.

2. ಹವ್ಯಾಸಿ ರಂಗಭೂಮಿಯ ನಟ-ನಟಿ, ನಿರ್ದೇಶಕ, ತಂತ್ರಜ್ಞರು, ರಂಗ ಸಂಗೀತ ತಜ್ಞರು, ಮತ್ತು ನಾಟಕಕಾರರನ್ನು ರಂಗಭೂಮಿಯಲ್ಲಿ ಸಲ್ಲಿಸಿರುವ ಈ ಪ್ರಶಸ್ತಿಗೆ ಪರಿಗಣಿಸಲಾಗುವುದು.

---

## 42. ವರ್ಣಶಿಲ್ಪಿ ವೆಂಕಟಪ್ಪ ಪ್ರಶಸ್ತಿ ನಿಯಮಾವಳಿಗಳು

1. ~~ಕರ್ನಾಟಕದ ಚಿತ್ರಕಲಾ ಕ್ಷೇತ್ರದಲ್ಲಿ ಮಹತ್ವದ ಕೊಡುಗೆ~~ ಸಲ್ಲಿಸಿರುವ ಚಿತ್ರಶಿಲ್ಪಿಗಳಲ್ಲಿ ವರ್ಣ ಶಿಲ್ಪಿ ವೆಂಕಟಪ್ಪ ಅವರದು ಬಹುಮಾನ್ಯವಾದ ಹೆಸರು. ಅವರು ವರ್ಣಚಿತ್ರ ಕ್ಷೇತ್ರಕ್ಕೆ ಸಲ್ಲಿಸಿರುವ ಅನುಪಮ ಸೇವೆಯನ್ನು ಗುರುತಿಸಿ ಚಿತ್ರಕಲಾ ಕ್ಷೇತ್ರದಲ್ಲಿ ಅನನ್ಯ ಸಾಧನೆ ಮಾಡಿರುವ ಕಲಾವಿದರಿಗೆ 'ವರ್ಣಶಿಲ್ಪಿ ವೆಂಕಟಪ್ಪ ಪ್ರಶಸ್ತಿ' ನೀಡಿ ಗೌರವಿಸಲಾಗುವುದು.
2. ಈ ಪ್ರಶಸ್ತಿಗೆ ಎಲ್ಲಾ ಪ್ರಕಾರಗಳ ಚಿತ್ರಕಲಾವಿದರನ್ನು ಪರಿಗಣಿಸಲಾಗುವುದು.

---

## 43. ಜಕಣಾಚಾರಿ ಪ್ರಶಸ್ತಿ ನಿಯಮಾವಳಿಗಳು

1. ಕನ್ನಡ ನಾಡಿನ ಶಿಲ್ಪ ಸೌಂದರ್ಯದ ಖನಿ ಬೇಲೂರು-ಹಳೇಬೀಡು. ಶಿಲ್ಪ ವೈಭವಗಳ ಸಾಮ್ರಾಜ್ಯವನ್ನು ಕನ್ನಡನಾಡಿಗೆ ಒದಗಿಸಿಕೊಟ್ಟ ಅಮರಶಿಲ್ಪಿ ಜಕಣಾಚಾರಿಯ ಹೆಸರಿನಲ್ಲಿ ಶಿಲ್ಪ ಕಲಾವಿದರಿಗೆ ಪ್ರಶಸ್ತಿ ನೀಡಿ ಗೌರವಿಸಲಾಗುವುದು.
2. ಈ ಪ್ರಶಸ್ತಿಗೆ ಲೋಹಶಿಲ್ಪ, ಕಾಷ್ಟಶಿಲ್ಪ, ಶಿಲಾಶಿಲ್ಪ ಮತ್ತಿತರ ಪ್ರಕಾರದ ಸಾಂಪ್ರದಾಯಿಕ ಮತ್ತು ಆಧುನಿಕ ಶಿಲ್ಪಕಲಾ ಕಲಾವಿದರನ್ನು ಪರಿಗಣಿಸಲಾಗುವುದು.

(ಮಲ್ಲಿಕಾರ್ಜುನ)
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ.

ಸರ್ಕಾರಿ ಆದೇಶ ಸಂಖ್ಯೆ:ಸಂಕಇ 83 ಕಸಾಧ 99, ದಿನಾಂಕ:7-6-1999ರ

## ಅನುಬಂಧ

1) ಈ ಪ್ರಶಸ್ತಿಯು ಕರ್ನಾಟಕ ಸರ್ಕಾರ ನೀಡುವ ಅತ್ಯುನ್ನತ ಪ್ರಶಸ್ತಿ ಎಂದು ಪರಿಗಣಿಸತಕ್ಕದ್ದು.

2) ಈ ಪ್ರಶಸ್ತಿಯನ್ನು ಕರ್ನಾಟಕದಲ್ಲಿ ಜನಿಸಿ, ರಾಜ್ಯ ರಾಷ್ಟ್ರ ಹಾಗೂ ಅಂತರರಾಷ್ಟ್ರೀಯ ಮಟ್ಟದಲ್ಲಿ ವಿವಿಧ ಕ್ಷೇತ್ರಗಳಲ್ಲಿ ಅಂದರೆ ಸಾಂಸ್ಕೃತಿಕ, ವೈಜ್ಞಾನಿಕ, ಮಾನವಿಕ, ಸಾಮಾಜಿಕ ಹಾಗೂ ಆರ್ಥಿಕ ಕ್ಷೇತ್ರಗಳಲ್ಲಿ ಅತ್ಯಂತ ಗಣನೀಯ ಸೇವೆಯನ್ನು ಸಲ್ಲಿಸಿರುವ ಗಣ್ಯರಿಗೆ ನೀಡಬಹುದಾಗಿದೆ.

3) ಈ ಪ್ರಶಸ್ತಿಗೆ ಪರಿಗಣಿಸಬಹುದಾದ ಗಣ್ಯರ ವಯಸ್ಸು ಕನಿಷ್ಠ 60 ವರ್ಷಗಳು.

4) ಪ್ರತಿವರ್ಷ ಆ ಸಾಲಿನ ಪ್ರಶಸ್ತಿಯನ್ನು ನೀಡುವ ಮುನ್ನ ಪ್ರಶಸ್ತಿಗಾಗಿ ಪರಿಗಣಿಸಬಹುದಾದ ಗಣ್ಯರ ಹೆಸರನ್ನು ಸೂಚಿಸಲು ಸಲಹಾ ಸಮಿತಿಯೊಂದನ್ನು ರಚಿಸುವುದು.

5) ಈ ಪ್ರಶಸ್ತಿಯು ಪ್ರತಿವರ್ಷ ಯಾವುದೇ ಕ್ಷೇತ್ರದಲ್ಲಾಗಲೀ ಒಬ್ಬ ವ್ಯಕ್ತಿಗೆ ಮಾತ್ರ ಸಲ್ಲತಕ್ಕದ್ದು.

6) ಯಾವುದೇ ಸಾಲಿನಲ್ಲಿ ಈ ಪ್ರಶಸ್ತಿಗೆ ಅರ್ಹರಾದ ವ್ಯಕ್ತಿಯು ಲಭ್ಯವಿಲ್ಲದಿದ್ದಲ್ಲಿ ಈ ಸಾಲಿನಲ್ಲಿ ಪ್ರಶಸ್ತಿಯನ್ನು ಘೋಷಿಸುವ ಅಗತ್ಯವಿರುವುದಿಲ್ಲ.

7) ಪ್ರಶಸ್ತಿಯು ಆಕರ್ಷಣೀಯ ಫಲಕ, ಪ್ರಶಸ್ತಿ ಪತ್ರ, ಶಾಲು ಮತ್ತು ಕರ್ನಾಟಕ ಸರ್ಕಾರದ ಲಾಂಛನವುಳ್ಳ, 50 ಗ್ರಾಂ ತೂಕವುಳ್ಳ ಚಿನ್ನದ ಫಲಕವನ್ನು ಹೊಂದಿರುತ್ತದೆ.

8) ಈ ಸಂಬಂಧದಲ್ಲಿ ಸರ್ಕಾರದ ತೀರ್ಮಾನವೇ ಅಂತಿಮ.

([illegible])
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ.




# ಕರ್ನಾಟಕ ಸರ್ಕಾರದ ನಡವಳಿಗಳು

*ವಿಷಯ : ರಾಜ್ಯದ ಹತ್ತು ಅಕಾಡೆಮಿಗಳ ಸಾಮಾನ್ಯ ಅಂಗರಚನೆ ಕುರಿತು*

ಓದಲಾಗಿದೆ :
೧) ಆದೇಶ ಸಂ : ಇಡಿ ೩೮ ಎಂಎಸ್‌ಎ ೭೭, ದಿ: ೧-೬-೭೭
೨) ಆದೇಶ ಸಂ : ಇಡಿ ೭೨ ಎಂಎಸ್‌ಎ ೭೮, ದಿ: ೨೮-೧೧-೭೮
೩) ಆದೇಶ ಸಂ : ಇಡಿ ೩೬ ಎಂಎಸ್‌ಎ ೭೬, ದಿ: ೨-೧೧-೭೭
೪) ಆದೇಶ ಸಂ : ಇಡಿ ೫೩ ಎಂಎಸ್‌ಎ ೭೯, ದಿ: ೨-೮-೭೯
೫) ಆದೇಶ ಸಂ : ಇಡಿ ೧೬೧ ಎಂಎಸ್‌ಎ ೭೭, ದಿ:೩-೧೧-೮೦
೬) ಆದೇಶ ಸಂ : ಸಂಕಇ ೧೯ ಕರಅ ೯೪, ದಿ: ೨೦-೪-೯೪
೭) ಆದೇಶ ಸಂ : ಸಂಕಇ ೧೯ ಕರಅ ೯೪(೨) ದಿ: ೨೧-೪-೯೪
೮) ಆದೇಶ ಸಂ : ಸಂಕಇ ೧೯ ಕರಅ ೯೪(೪) ದಿ: ೨೬-೪-೯೪
೯) ಆದೇಶ ಸಂ : ಸಂಕಇ ೬೧ ಕರಅ ೯೪, ದಿ: ೧೦-೮-೯೪
೧೦) ಆದೇಶ ಸಂ : ಸಂಕಇ ೬೫ ಕರಅ ೦೩, ದಿ: ೧೮-೯-೦೩
೧೧) ಕನ್ನಡ ಮತ್ತು ಸಂಸ್ಕೃತಿ ನಿರ್ದೇಶಕರ ಪತ್ರ ಸಂಖ್ಯೆ ಕಸನಿ:೯:ಅಕಾಡೆಮಿ:೨೦೦೩-೦೪ ದಿ: ೨೫-೫-೨೦೦೪

## ಪ್ರಸ್ತಾವನೆ

ಮೇಲೆ ಓದಲಾದ ೧ರಿಂದ ೯ರ ವಿವಿಧ ಆದೇಶಗಳನ್ವಯ ರಾಜ್ಯದ ಹತ್ತು ಅಕಾಡೆಮಿಗಳನ್ನು ರಚಿಸಲು ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದೊಡನೆ ಕಾರ್ಯನಿರ್ವಹಿಸಲು ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂ:೧೦ರ ಆದೇಶದನ್ವಯ ಎಲ್ಲಾ ಅಕಾಡೆಮಿಗಳ ಕಾರ್ಯವ್ಯಾಪ್ತಿ ಬೇರೆ ಬೇರೆಯಾಗಿದ್ದರೂ ಅವುಗಳನ್ನು ಸಮನ್ವಯಗೊಳಿಸುವ ಹಿನ್ನೆಲೆಯಲ್ಲಿ ಏಕರೂಪತೆ ಸಾಧ್ಯವಿರುವುದರಿಂದ ಏಕರೂಪತೆ ಮತ್ತು ಸಮನ್ವಯತೆಯನ್ನು ತರಲು ಏಕರೂಪತೆಯ ನಿಯಮಾವಳಿಗಳನ್ನು ಹೊರಡಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (೧೧)ರ ಪತ್ರದಲ್ಲಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ

ನಿರ್ದೇಶನಾಲಯ ಇವರು ಓದಲಾದ (೧೦)ರ ಆದೇಶದಲ್ಲಿ ಕೆಲವೊಂದು ನ್ಯೂನತೆಗಳು ಕಂಡುಬಂದಿದ್ದು ಅವುಗಳನ್ನು ಪರಿಷ್ಕರಿಸಿ ತಿದ್ದುಪಡಿ ಪರಿಷ್ಕೃತ ನಿಯಮಾವಳಿಗಳನ್ನು ಹೊರಡಿಸುವಂತೆ ಕೋರಿದ್ದಾರೆ. ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಂಕಇ ೬೫ ಕರಅ ೨೦೦೩,**
**ಬೆಂಗಳೂರು, ದಿ: ೧೪-೩-೨೦೦೫**

ರಾಜ್ಯದಲ್ಲಿ ಹಾಲಿ ಇರುವ ಹತ್ತು ಅಕಾಡೆಮಿಗಳ ಸಾಮಾನ್ಯ ಅಂಗರಚನೆಯನ್ನು ರಚಿಸಿ ಅವುಗಳನ್ನು ಸಮನ್ವಯಗೊಳಿಸುವ ಹಿನ್ನೆಲೆಯಲ್ಲಿ ಏಕರೂಪತೆ ನಿಯಮಾವಳಿಗಳನ್ನು ಪರಿಷ್ಕರಿಸಿ ಅನುಬಂಧದಲ್ಲಿ ಆಯಾ ಅಕಾಡೆಮಿಗಳ ಮುಂದೆ ಸೂಚಿಸಿದಂತೆ ಆದೇಶ ಹೊರಡಿಸಿದ ದಿನಾಂಕದಿಂದ ಮುಂದಿನ ಆದೇಶದವರೆಗೆ ಜಾರಿಯಲ್ಲಿ ಬರುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು
ಅವರ ಹೆಸರಿನಲ್ಲಿ,
ಸಹಿ/-
(ಟಿ.ಕೆ. ರಾಮಚಂದ್ರ)
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)
ಕನ್ನಡ ಮತ್ತು ಸಂಸ್ಕೃತಿ ಇಲಾಖೆ

ಗೆ,

ಸಂಕಲನಕಾರರು, ಕರ್ನಾಟಕ ರಾಜ್ಯ ಪತ್ರ, ಬೆಂಗಳೂರು ಇವರ ಮುಂದಿನ ರಾಜ್ಯ ಪತ್ರದಲ್ಲಿ ಪ್ರಕಟಿಸುವ ಸಲುವಾಗಿ

ಪ್ರತಿ :

೧) ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು
೨) ಮಾನ್ಯ ಮುಖ್ಯಮಂತ್ರಿಯವರ ಆಪ್ತ ಕಾರ್ಯದರ್ಶಿಗಳು, ವಿಧಾನಸೌಧ
೩) ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು
೪) ಸಂಬಂಧಪಟ್ಟ ಎಲ್ಲಾ ಅಕಾಡೆಮಿಗಳಿಗೆ (ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶಕರ ಮುಖಾಂತರ)
೫) ಪ್ರಧಾನ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಗಳು ಹಾಗೂ ಉಪಕಾರ್ಯದರ್ಶಿಯವರ ಆಪ್ತ ಸಹಾಯಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ
೬) ಸಾಪ್ತಾಹಿಕ ಗೆಜೆಟ್
೭) ರಕ್ಷಾ ಕಡತ : ಹೆಚ್ಚಿನ ಪ್ರತಿಗಳು



**ಆದೇಶ ಸಂಖ್ಯೆ : ಸಂಕಇ: ೬೫ ಕರಅ ೨೦೦೫, ದಿನಾಂಕ : ೧೪-೩-೨೦೦೫ಕ್ಕೆ**

## ಅನುಬಂಧ

### ಕರ್ನಾಟಕ ರಾಜ್ಯ ಅಕಾಡೆಮಿಗಳ ನಿಯಮಾವಳಿ

ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಡಳಿತ ವ್ಯಾಪ್ತಿಯಲ್ಲಿ ಎಲ್ಲ ಅಕಾಡೆಮಿಗಳ ಕಾರ್ಯಚಟುವಟಿಕೆಗಳಲ್ಲಿ ಏಕರೂಪತೆಯನ್ನು ತಂದು ಅವು ಯೋಜಿತವಾಗಿ ಹಾಗೂ ಸಮನ್ವಿತವಾಗಿ ನಡೆಯುವ ದೃಷ್ಟಿಯಿಂದ ಏಕರೂಪದ ನಿಯಮಾವಳಿಯನ್ನು ರಚಿಸಲಾಗಿದೆ.

I. ಈ ನಿಯಮಾವಳಿಯನ್ನು **ಕರ್ನಾಟಕ ರಾಜ್ಯ ಅಕಾಡೆಮಿಗಳ ನಿಯಮಾವಳಿ** ಎಂದು ಕರೆಯತಕ್ಕದ್ದು.

II. ಕರ್ನಾಟಕ ಸರ್ಕಾರವು ಸ್ಥಾಪಿಸಿರುವ ಅಕಾಡೆಮಿಗಳೆಂದರೆ :

೧. ಕರ್ನಾಟಕ ಸಾಹಿತ್ಯ ಅಕಾಡೆಮಿ
೨. ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ
೩. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ
೪. ಕರ್ನಾಟಕ ನಾಟಕ ಅಕಾಡೆಮಿ
೫. ಕರ್ನಾಟಕ ಲಲಿತಕಲಾ ಅಕಾಡೆಮಿ
೬. ಕರ್ನಾಟಕ ಶಿಲ್ಪಕಲಾ ಅಕಾಡೆಮಿ
೭. ಕರ್ನಾಟಕ ಉರ್ದು ಅಕಾಡೆಮಿ
೮. ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ
೯. ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿ
೧೦. ಕರ್ನಾಟಕ ಕೊಡವ ಸಾಹಿತ್ಯ ಅಕಾಡೆಮಿ

III. ಇನ್ನು ಮುಂದೆ 'ಆಯಾ ಅಕಾಡೆಮಿಗಳು' ಎಂದರೆ ನಿರ್ದಿಷ್ಟ ಕ್ಷೇತ್ರಗಳ ವಿಷಯ ಪ್ರಸ್ತಾಪವಾದಾಗ ಆ ಕ್ಷೇತ್ರದ ಅಕಾಡೆಮಿ ಎಂದು ಭಾವಿಸಬೇಕು. ಉದಾ:- ಸಾಹಿತ್ಯ ವಿಷಯ ಬಂದಾಗ ಕರ್ನಾಟಕ ಸಾಹಿತ್ಯ ಅಕಾಡೆಮಿ, ಉರ್ದು ವಿಷಯ ಬಂದಾಗ ಕರ್ನಾಟಕ ಉರ್ದು ಅಕಾಡೆಮಿ, ಕೊಡವ ಸಾಹಿತ್ಯ ಸಂಸ್ಕೃತಿ ವಿಷಯ ಬಂದಾಗ ಕರ್ನಾಟಕ ಕೊಡವ ಸಾಹಿತ್ಯ ಅಕಾಡೆಮಿ.... ಮುಂತಾಗಿ.

IV. ಈ ಅಕಾಡೆಮಿಗಳ ಕೇಂದ್ರ ಕಚೇರಿಗಳು ಅವುಗಳ ಹೆಸರಿನ ಮುಂದೆ ಸೂಚಿಸಿರುವ ಸ್ಥಳಗಳಲ್ಲಿ ಇರತಕ್ಕದ್ದು :

| | | |
|---|---|---|
| ೧. | ಕರ್ನಾಟಕ ಸಾಹಿತ್ಯ ಅಕಾಡೆಮಿ | ಬೆಂಗಳೂರು |
| ೨. | ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ | ಬೆಂಗಳೂರು |
| ೩. | ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ | ಬೆಂಗಳೂರು |
| ೪. | ಕರ್ನಾಟಕ ನಾಟಕ ಅಕಾಡೆಮಿ | ಬೆಂಗಳೂರು |
| ೫. | ಕರ್ನಾಟಕ ಲಲಿತಕಲಾ ಅಕಾಡೆಮಿ | ಬೆಂಗಳೂರು |
| ೬. | ಕರ್ನಾಟಕ ಶಿಲ್ಪಕಲಾ ಅಕಾಡೆಮಿ | ಬೆಂಗಳೂರು |
| ೭. | ಕರ್ನಾಟಕ ಉರ್ದು ಅಕಾಡೆಮಿ | ಬೆಂಗಳೂರು |
| ೮. | ಕರ್ನಾಟಕ ಕೊಡವ ಸಾಹಿತ್ಯ ಅಕಾಡೆಮಿ | ಮಡಿಕೇರಿ |
| ೯. | ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿ | ಮಂಗಳೂರು |
| ೧೦. | ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ | ಮಂಗಳೂರು |

V. ಅಕಾಡೆಮಿಗಳು ಈ ಕೆಳಕಂಡ ಧ್ಯೇಯಗಳನ್ನು ಮತ್ತು ಉದ್ದೇಶಗಳನ್ನು ಹೊಂದಿರತಕ್ಕದ್ದು, ಎಂದರೆ :

ಅ) ಆಯಾ ಅಕಾಡೆಮಿಗೆ ಸಂಬಂಧಿಸಿದ ಕ್ಷೇತ್ರದಲ್ಲಿ ಅಧ್ಯಯನ ಮತ್ತು ಸಂಶೋಧನೆಗೆ ಉತ್ತೇಜನ ನೀಡುವುದು. ಈ ಉದ್ದೇಶಕ್ಕಾಗಿ ಸಂಶೋಧನಾಲಯ, ಗ್ರಂಥಾಲಯ ಮುಂತಾದುವನ್ನು ಸ್ಥಾಪಿಸುವುದು.

ಆ) ಆಯಾ ಅಕಾಡೆಮಿಯು ತನ್ನ ಉದ್ದೇಶಗಳ ಅಭಿವೃದ್ಧಿಗಾಗಿ ಮತ್ತು ಬೆಳವಣಿಗೆಗಾಗಿ ಬೇರೆ ಕಡೆಗಳಲ್ಲಿರುವ ಅದೇ ರೀತಿಯ ಅಕಾಡೆಮಿಗಳೊಂದಿಗೆ ಮತ್ತು ಕರ್ನಾಟಕ ದಲ್ಲಿರುವ ಇತರ ಸಂಸ್ಥೆಗಳೊಡನೆ ಸಹಕರಿಸುವುದು; ಉತ್ತೇಜನ ನೀಡುವುದು.

ಇ) ಆಯಾ ಅಕಾಡೆಮಿಯ ಕಾರ್ಯಚಟುವಟಿಕೆಗಳ ಉದ್ದೇಶಕ್ಕಾಗಿ ಸರ್ಕಾರದಿಂದ ಪಡೆದ ಅನುದಾನ ಹಾಗೂ ವಿವಿಧ ಮೂಲಗಳಿಂದ ವಂತಿಕೆಗಳು ಮತ್ತು ದಾನಗಳ ಮೂಲಕ ನಿಧಿ ಸಂಗ್ರಹಣೆ ಮಾಡಬಹುದ್ದು. ಹೀಗೆ ಸಂಗ್ರಹಿಸಿದ ನಿಧಿಯನ್ನು ಅಕಾಡೆಮಿಯ ಕಾರ್ಯೋದ್ದೇಶಗಳಿಗೆ ಬದ್ಧವಾಗಿ ಬಳಸಿದ ಬಗ್ಗೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, ಕರ್ನಾಟಕ ಆರ್ಥಿಕ ಸಂಹಿತೆ, ಸಾದಿಲ್ವಾರು ಸಂಹಿತೆ ಪ್ರಕಾರ ಖರ್ಚಿನ ವಿವರಗಳನ್ನು ಇಡುವುದು. ವಂತಿಕೆ ಹಾಗೂ ದಾನ ಕೊಟ್ಟವರು ಅಪೇಕ್ಷಿಸಿದಲ್ಲಿ ಅವರ ವಂತಿಕೆ ಹಾಗೂ ದಾನದ ಮೊತ್ತದ ಖರ್ಚಿನ ವಿವರಗಳನ್ನು ಲಿಖಿತವಾಗಿ ಅವರಿಗೆ ಒದಗಿಸುವುದು.

ಈ) ಆಯಾ ಅಕಾಡೆಮಿಯು ತನ್ನ ವಿಷಯ ಕ್ಷೇತ್ರಕ್ಕೆ ಸಂಬಂಧಿಸಿದಂತೆ ವಿಚಾರ ಸಂಕಿರಣ,



ಕಾರ್ಯಾಗಾರ, ಸಂವಾದ, ಉನ್ನತ ಮಟ್ಟದ ಅಕಾಡೆಮಿಕ್ ಉತ್ಸವ ಮುಂತಾದ ಕಾರ್ಯಕ್ರಮಗಳನ್ನು ನಡೆಸುವುದು. ಈ ಕಾರ್ಯಕ್ರಮಗಳನ್ನು ಎರಡು ವಿಧಾನ ಗಳಲ್ಲಿ ವ್ಯವಸ್ಥೆಗೊಳಿಸಬಹುದು :

೧) ಅಕಾಡೆಮಿಗಳೇ ನೇರವಾಗಿ ಈ ಕಾರ್ಯಕ್ರಮಗಳನ್ನು ರೂಪಿಸಿ ವ್ಯವಸ್ಥೆ ಗೊಳಿಸುವುದು.

೨) ವಿವಿಧ ಸಂಘ-ಸಂಸ್ಥೆಗಳ ಜೊತೆ ಸಂಯುಕ್ತವಾಗಿ ಕಾರ್ಯಕ್ರಮಗಳನ್ನು ವ್ಯವಸ್ಥೆಗೊಳಿಸುವುದು.

ಉ) ಕರ್ನಾಟಕ ಸರ್ಕಾರ, ಕೇಂದ್ರ ಸರ್ಕಾರ ಮತ್ತು ಕೇಂದ್ರ ಅಕಾಡೆಮಿಗಳು ಅಪೇಕ್ಷಿಸಿ ದಾಗ ಸೂಕ್ತ ಸಲಹೆಗಳನ್ನು ನೀಡುವುದು.

ಊ) ಆಯಾ ಅಕಾಡೆಮಿಗಳು ತಂತಮ್ಮ ಕ್ಷೇತ್ರವ್ಯಾಪ್ತಿಗೆ ಸಂಬಂಧಿಸಿದ ಪುಸ್ತಕ ಪ್ರಕಟಣೆ ಗಳನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದ ರೀತಿ ಮಾಡಬಹುದು. ಈ ಪ್ರಕಟಣೆಗಳಿಗೆ ವಾರ್ಷಿಕ ಅನುದಾನದಲ್ಲಿ ವಾರ್ಷಿಕ ಕಾರ್ಯಕ್ರಮಗಳಿಗೆ ಗೊತ್ತುಪಡಿಸಿದ ಮೊತ್ತದಲ್ಲಿ ಶೇ. ೧೫ರಷ್ಟನ್ನು ಮಾತ್ರ ಹಂಚಿಕೆ ಮಾಡಿ ಬಳಸಿಕೊಳ್ಳಬೇಕು.

ಋ) ಅಕಾಡೆಮಿಗಳು ತಂತಮ್ಮ ಕ್ಷೇತ್ರ ಹಾಗೂ ವ್ಯಾಪ್ತಿಗೆ ಸೇರಿದ ಮಾಹಿತಿ ಸಂಗ್ರಹ ಕಾರ್ಯವನ್ನು ಮಾಡುವುದು.

ಎ) ತನ್ನ ಉದ್ದೇಶಗಳ ಮುನ್ನಡೆಗಾಗಿ ಅಗತ್ಯವಿರಬಹುದಾದ ಮೇಲೆ ತಿಳಿಸಿದಂಥ ಧ್ಯೇಯೋದ್ದೇಶಗಳಿಗೆ ಅನುಗುಣವಾದ ಕಾರ್ಯಗಳನ್ನು ನಿರ್ವಹಿಸುವುದು.

ಏ) ಆಯಾ ವರ್ಷದ ಆಯವ್ಯಯದ ಪರಿಮಿತಿಯಲ್ಲಿ ಆರ್ಥಿಕ ವರ್ಷದ ಪ್ರಾರಂಭ ದಲ್ಲಿಯೇ ಕ್ರಿಯಾಯೋಜನೆ ಮತ್ತು ಬಜೆಟ್‌ನ್ನು ಸಿದ್ಧಪಡಿಸಿ ಸರ್ಕಾರದಿಂದ ಅನುಮೋದನೆ ಪಡೆಯಬೇಕು ಮತ್ತು ಆ ಪ್ರಕಾರ ಅನುಷ್ಠಾನಗೊಳಿಸಬೇಕು.

ಐ) ಅಕಾಡೆಮಿಗಳು ತಂತಮ್ಮ ಕ್ಷೇತ್ರದ ಪ್ರತಿಭಾನ್ವಿತರಿಗೆ ಪ್ರಶಸ್ತಿ-ಪುರಸ್ಕಾರ ಹಾಗೂ ಬಹುಮಾನಗಳನ್ನು ಪ್ರತಿವರ್ಷವೂ ಕೊಡಬೇಕು. ಅವುಗಳ ವಿವರ ಈ ಮುಂದಿನಂತೆ ಇರುತ್ತವೆ:

೧) ಕರ್ನಾಟಕ ಸಾಹಿತ್ಯ ಅಕಾಡೆಮಿ

ಅ) ಸಾಹಿತ್ಯ ಕ್ಷೇತ್ರದಲ್ಲಿ ಸಲ್ಲಿಸಿದ ಅನನ್ಯ ಸೇವೆಗಾಗಿ ಐವರು ಲೇಖಕರಿಗೆ ಗೌರವ ಪ್ರಶಸ್ತಿಗಳನ್ನು ಕೊಡುವುದು. ಗೌರವ ಪ್ರಶಸ್ತಿಯ ಮೊತ್ತ ತಲಾ ರೂ. ೧೦,೦೦೦/-ಗಳು.

ಆ) ಪುಸ್ತಕ ಬಹುಮಾನ

ಸಾಹಿತ್ಯದ ಎಲ್ಲ ಪ್ರಕಾರಗಳನ್ನು ಪರಿಗಣಿಸಿ ಪ್ರತಿ ಪ್ರಕಾರದ ಒಂದು ಉತ್ತಮ ಪುಸ್ತಕಕ್ಕೆ ರೂ. ೫,೦೦೦/-ಗಳ ಬಹುಮಾನವನ್ನು ನೀಡುವುದು. ಹೀಗೆ ಬಹುಮಾನಕ್ಕೆ ಪರಿಗಣಿಸುವ ಪ್ರತಿ ಪ್ರಕಾರದಲ್ಲೂ ಕನಿಷ್ಠ ೧೦ ಶೀರ್ಷಿಕೆಗಳಾದರೂ ಪ್ರಕಟವಾಗಿರಬೇಕು.

೨) **ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ**

ಅ) ಜಾನಪದ ಮತ್ತು ಯಕ್ಷಗಾನ ಕ್ಷೇತ್ರದಲ್ಲಿ ಸಲ್ಲಿಸಿದ ಅನನ್ಯ ಸೇವೆಗಾಗಿ ಅವರ ಹಿರಿತನ ಹಾಗೂ ಪಕ್ವತೆಯ ಮಾನದಂಡವನ್ನು ಮಾತ್ರ ಅನುಲಕ್ಷಿಸಿ ಇಬ್ಬರಿಗೆ ಜಾನಪದ ಮತ್ತು ಯಕ್ಷಗಾನ ಕ್ಷೇತ್ರದಲ್ಲಿ ತಲಾ ಒಂದರಂತೆ ಗೌರವ ಪ್ರಶಸ್ತಿಯನ್ನು ನೀಡುವುದು. ಈ ಪ್ರಶಸ್ತಿಗಳನ್ನು ಸಾಂಸ್ಕೃತಿಕ ಹಾಗೂ ಐತಿಹಾಸಿಕ ಹಿನ್ನೆಲೆಯಿರುವ ಹೆಸರಿನಲ್ಲಿಟ್ಟು ಗೌರವ ಪ್ರಶಸ್ತಿಗಳನ್ನು ಕೊಡುವುದು. ಪ್ರಶಸ್ತಿಯ ಮೊತ್ತ ರೂ. ೧೦,೦೦೦/-

ಆ) ಜಾನಪದ ಮತ್ತು ಯಕ್ಷಗಾನ ಕ್ಷೇತ್ರದ ವಿವಿಧ ಪ್ರಕಾರಗಳನ್ನು ಪರಿಗಣಿಸಿ ಗರಿಷ್ಠ ೩೦ ಜನ ಕಲಾವಿದರಿಗೆ ವಾರ್ಷಿಕ ಪ್ರಶಸ್ತಿಯನ್ನು ನೀಡುವುದು. ವಾರ್ಷಿಕ ಪುರಸ್ಕಾರದ ಮೊತ್ತ ತಲಾ ರೂ. ೫,೦೦೦/-

ಇ) ಆಯಾ ವರ್ಷದಲ್ಲಿ ಜಾನಪದ ಮತ್ತು ಯಕ್ಷಗಾನ ಪ್ರಕಾರಗಳಲ್ಲಿ ಪ್ರಕಟಿಸಲಾದ ಒಂದು ಉತ್ತಮ ಪುಸ್ತಕಕ್ಕೆ ರೂ. ೫,೦೦೦/-ಗಳ ಬಹುಮಾನ ನೀಡುವುದು. ಹೀಗೆ ಬಹುಮಾನಕ್ಕೆ ಪರಿಗಣಿಸುವ ಪ್ರತಿ ಪ್ರಕಾರದಲ್ಲೂ ಆ ವರ್ಷದಲ್ಲಿ ಕನಿಷ್ಠ ೧೦ ಶೀರ್ಷಿಕೆಗಳಾದರೂ ಪ್ರಕಟವಾಗಿರಬೇಕು.

೩) **ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ**

ಅ) ಸಂಗೀತ, ನೃತ್ಯ, ಗಮಕ, ಕಾವ್ಯವಾಚನ, ಕಥಾಕೀರ್ತನ ಮುಂತಾದ ಕ್ಷೇತ್ರಗಳೂ ಸೇರಿದಂತೆ ಆಯಾ ಕ್ಷೇತ್ರದಲ್ಲಿ ಸಲ್ಲಿಸಿದ ಅನನ್ಯ ಸೇವೆಗಾಗಿ ಇಬ್ಬರಿಗೆ ಗೌರವ ಪ್ರಶಸ್ತಿಗಳನ್ನು ಕೊಡುವುದು. ಈ ಗೌರವ ಪ್ರಶಸ್ತಿಯನ್ನು ಒಂದು ಸಂಗೀತ ಕ್ಷೇತ್ರಕ್ಕೆ, ಒಂದು ನೃತ್ಯ ಕ್ಷೇತ್ರಕ್ಕೆ ಪರಿಗಣಿಸಬೇಕು. ಪ್ರಶಸ್ತಿಯ ಮೊತ್ತ ತಲಾ ರೂ. ೧೦,೦೦೦/-

ಆ) ಸಂಗೀತ, ನೃತ್ಯ, ಗಮಕ, ಕಾವ್ಯವಾಚನ, ಕಥಾಕೀರ್ತನಾ ವಿವಿಧ ಪ್ರಕಾರಗಳನ್ನು ಪರಿಗಣಿಸಿ ಒಟ್ಟು ಹದಿನಾರು ಕಲಾವಿದರನ್ನು ಮೀರದಂತೆ ವಾರ್ಷಿಕ ಪ್ರಶಸ್ತಿಯನ್ನು ಕೊಡುವುದು. ಪುರಸ್ಕಾರದ ಮೊತ್ತ ತಲಾ ರೂ. ೫,೦೦೦/-ಗಳು.



ಇ) ಸಂಗೀತ ನೃತ್ಯ ಕ್ಷೇತ್ರದಲ್ಲಿ ಪ್ರಕಟವಾದ ಒಂದು ಉತ್ತಮ ಪುಸ್ತಕಕ್ಕೆ ಬಹುಮಾನ ನೀಡುವುದು. ಹೀಗೆ ಬಹುಮಾನಕ್ಕೆ ಪರಿಗಣಿಸುವ ಪ್ರತಿ ಪ್ರಕಾರದಲ್ಲೂ ಆ ವರ್ಷದಲ್ಲಿ ಕನಿಷ್ಠ ೧೦ ಶೀರ್ಷಿಕೆಗಳು ಪ್ರಕಟವಾಗಿರಬೇಕು. ಬಹುಮಾನದ ಮೊತ್ತ ರೂ. ೫,೦೦೦/-ಗಳು.

೪) **ಕರ್ನಾಟಕ ನಾಟಕ ಅಕಾಡೆಮಿ**

ಅ) ನಾಟಕ ಕ್ಷೇತ್ರದಲ್ಲಿ ಸಲ್ಲಿಸಿದ ಅನನ್ಯ ಸೇವೆಗಾಗಿ ಒಬ್ಬರಿಗೆ ಗೌರವ ಪ್ರಶಸ್ತಿಯನ್ನು ಕೊಡುವುದು. ಗೌರವ ಪ್ರಶಸ್ತಿಯ ಮೊತ್ತ ತಲಾ ರೂ. ೧೦,೦೦೦/-ಗಳು.

ಆ) ನಾಟಕ ಕ್ಷೇತ್ರದ ವಿವಿಧ ಪ್ರಕಾರಗಳಲ್ಲಿನ ಕೆಲಸವನ್ನು ಪರಿಗಣಿಸಿ ಹದಿನೈದು ಕಲಾವಿದರನ್ನು ಮೀರದಂತೆ ವಾರ್ಷಿಕ ಪುರಸ್ಕಾರವನ್ನು ಕೊಡುವುದು. ಪುರಸ್ಕಾರದ ಮೊತ್ತ ತಲಾ ರೂ. ೫,೦೦೦/-ಗಳು.

ಇ) ನಾಟಕ ಕ್ಷೇತ್ರದಲ್ಲಿ ಪ್ರಕಟವಾದ ಒಂದು ಉತ್ತಮ ಪುಸ್ತಕಕ್ಕೆ ಬಹುಮಾನ ನೀಡುವುದು. ಹೀಗೆ ಬಹುಮಾನಕ್ಕೆ ಪರಿಗಣಿಸುವಾಗ ಆ ವರ್ಷದಲ್ಲಿ ಕನಿಷ್ಠ ೧೦ ಶೀರ್ಷಿಕೆಗಳಾದರೂ ಪ್ರಕಟವಾಗಿರಬೇಕು. ಬಹುಮಾನದ ಮೊತ್ತ ರೂ. ೫೦೦೦/-ಗಳು.

೫) **ಕರ್ನಾಟಕ ಲಲಿತಕಲಾ ಅಕಾಡೆಮಿ**

ಅ) ಲಲಿತಕಲೆಯ ಕ್ಷೇತ್ರದಲ್ಲಿ ಸಲ್ಲಿಸಿದ ಅನನ್ಯ ಸೇವೆಗಾಗಿ ಮೂವರನ್ನು ಮೀರದಂತೆ ಗೌರವ ಪ್ರಶಸ್ತಿಗಳನ್ನು ಕೊಡುವುದು. ಗೌರವ ಪ್ರಶಸ್ತಿಯ ಮೊತ್ತ ತಲಾ ರೂ. ೧೦,೦೦೦/-ಗಳು.

ಆ) ವಿವಿಧ ಪ್ರಕಾರಗಳ ಕಲಾಕೃತಿಗಳನ್ನು ಪರಿಗಣಿಸಿ ಹತ್ತನ್ನು ಮೀರದಂತೆ ಉತ್ತಮ ಕಲಾಕೃತಿಗಳನ್ನು ಆಯ್ಕೆ ಮಾಡಿ ವಾರ್ಷಿಕ ಬಹುಮಾನಗಳನ್ನು ಕೊಡುವುದು. ಬಹುಮಾನದ ಮೊತ್ತ ತಲಾ ರೂ. ೫,೦೦೦/-ಗಳು.

ಇ) ಆಯಾ ವರ್ಷದಲ್ಲಿ ಪ್ರಕಟಿಸಲಾದ ಒಂದು ಉತ್ತಮ ಪುಸ್ತಕಕ್ಕೆ ಬಹುಮಾನ ನೀಡುವುದು. ಹೀಗೆ ಬಹುಮಾನಕ್ಕೆ ಪರಿಗಣಿಸುವಾಗ ಆ ವರ್ಷದಲ್ಲಿ ಕನಿಷ್ಠ ೧೦ ಶೀರ್ಷಿಕೆಗಳಾದರೂ ಪ್ರಕಟವಾಗಿರಬೇಕು. ಬಹುಮಾನದ ಮೊತ್ತ ರೂ. ೫೦೦೦/-ಗಳು.

೬) **ಕರ್ನಾಟಕ ಉರ್ದು ಅಕಾಡೆಮಿ**

ಅ) ಉರ್ದು ಕ್ಷೇತ್ರಕ್ಕೆ ಸಲ್ಲಿಸಿದ ಅನನ್ಯ ಸೇವೆಯನ್ನು ಪರಿಗಣಿಸಿ ಕರ್ನಾಟಕದ

ಐವರನ್ನು ಮೀರದಂತೆ ಗೌರವ ಪ್ರಶಸ್ತಿಗಳನ್ನು ಕೊಡುವುದು. ಗೌರವ ಪ್ರಶಸ್ತಿಯ ಮೊತ್ತ ತಲಾ ರೂ. ೧೦,೦೦೦/-ಗಳು.

ಆ) ಕನ್ನಡ-ಉರ್ದು ಭಾಷಾಂತರಕಾರರನ್ನು ಒಳಗೊಂಡಂತೆ ಉರ್ದು ಕ್ಷೇತ್ರದ ಪುಸ್ತಕಗಳನ್ನು ಪರಿಗಣಿಸಿ ಐದು ಪುಸ್ತಕಕ್ಕೆ ಮೀರದಂತೆ ಪುಸ್ತಕ ಬಹುಮಾನವನ್ನು ಕೊಡುವುದು. ಬಹುಮಾನದ ಮೊತ್ತ ರೂ. ೫,೦೦೦/-

ಇ) ಹೀಗೆ ಬಹುಮಾನಕ್ಕೆ ಪರಿಗಣಿಸುವಾಗ ಪ್ರತಿ ಪ್ರಕಾರದಲ್ಲೂ ಆ ವರ್ಷದಲ್ಲಿ ಕನಿಷ್ಠ ೧೦ ಶೀರ್ಷಿಕೆಗಳಾದರೂ ಪ್ರಕಟವಾಗಿರಬೇಕು. ಬಹುಮಾನದ ಮೊತ್ತ ರೂ. ೫,೦೦೦/-ಗಳು.

೭) **ಕರ್ನಾಟಕ ಶಿಲ್ಪಕಲಾ ಅಕಾಡೆಮಿ**

ಅ) ಶಿಲ್ಪಕಲೆಯ ಕ್ಷೇತ್ರದಲ್ಲಿ ಸಲ್ಲಿಸಿದ ಅನನ್ಯ ಸೇವೆಗಾಗಿ ಐವರನ್ನು ಮೀರದಂತೆ ಐದು ಗೌರವ ಪ್ರಶಸ್ತಿಯನ್ನು ಕೊಡುವುದು. ಗೌರವ ಪ್ರಶಸ್ತಿಯ ಮೊತ್ತ ರೂ. ೧೦,೦೦೦/-ಗಳು.

ಆ) ಆಯಾ ವರ್ಷದಲ್ಲಿ ಪ್ರಕಟಿಸಲಾದ ಒಂದು ಉತ್ತಮ ಪುಸ್ತಕಕ್ಕೆ ಬಹುಮಾನ ನೀಡುವುದು. ಹೀಗೆ ಬಹುಮಾನಕ್ಕೆ ಪರಿಗಣಿಸುವಾಗ ಆ ವರ್ಷದಲ್ಲಿ ಕನಿಷ್ಠ ೧೦ ಶೀರ್ಷಿಕೆಗಳಾದರೂ ಪ್ರಕಟವಾಗಿರಬೇಕು. ಬಹುಮಾನದ ಮೊತ್ತ ರೂ. ೫,೦೦೦/-ಗಳು.

೮) **ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ**

ಅ) ತುಳು ಭಾಷೆ, ಸಾಹಿತ್ಯ, ಕಲೆ ಮುಂತಾದ ಸಾಂಸ್ಕೃತಿಕ ಕ್ಷೇತ್ರದಲ್ಲಿ ಸಲ್ಲಿಸಿದ ಅನನ್ಯ ಸೇವೆಯನ್ನು ಪರಿಗಣಿಸಿ ಕರ್ನಾಟಕದ ಮೂವರನ್ನು ಮೀರದಂತೆ ಗೌರವ ಪ್ರಶಸ್ತಿಗಳನ್ನು ಕೊಡುವುದು. ಗೌರವ ಪ್ರಶಸ್ತಿಯ ಮೊತ್ತ ತಲಾ ರೂ. ೧೦,೦೦೦/-ಗಳು.

ಆ) ಕನ್ನಡ-ತುಳು ಭಾಷಾಂತರವನ್ನು ಒಳಗೊಂಡಂತೆ ಗರಿಷ್ಠ ಮೂರು ಪುಸ್ತಕ ಬಹುಮಾನವನ್ನು ಕೊಡುವುದು. ಹೀಗೆ ಬಹುಮಾನಕ್ಕೆ ಪರಿಗಣಿಸುವ ಪ್ರತಿ ಪ್ರಕಾರದಲ್ಲೂ ಆ ವರ್ಷದಲ್ಲಿ ಕನಿಷ್ಠ ೧೦ ಶೀರ್ಷಿಕೆಗಳಾದರೂ ಪ್ರಕಟವಾಗಿರಬೇಕು. ಬಹುಮಾನದ ಮೊತ್ತ ರೂ. ೫,೦೦೦/-ಗಳು.

೯) **ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿ**

ಅ) ಕೊಂಕಣಿ ಭಾಷೆ, ಸಾಹಿತ್ಯ, ಕಲೆ ಮುಂತಾದ ಸಾಂಸ್ಕೃತಿಕ ಕ್ಷೇತ್ರದಲ್ಲಿ ಸಲ್ಲಿಸಿದ ಅನನ್ಯ ಸೇವೆಯನ್ನು ಪರಿಗಣಿಸಿ ಕರ್ನಾಟಕದ ಮೂವರನ್ನು



ಮೀರದಂತೆ ಗೌರವ ಪ್ರಶಸ್ತಿಗಳನ್ನು ಕೊಡುವುದು. ಪ್ರಶಸ್ತಿಯ ಮೊತ್ತ ತಲಾ ರೂ. ೧೦,೦೦೦/-ಗಳು.

ಆ) ಕನ್ನಡ-ಕೊಂಕಣಿ ಭಾಷಾಂತರವನ್ನು ಒಳಗೊಂಡಂತೆ ಗರಿಷ್ಠ ಮೂರು ಪುಸ್ತಕ ಬಹುಮಾನವನ್ನು ಕೊಡುವುದು. ಹೀಗೆ ಬಹುಮಾನಕ್ಕೆ ಪರಿಗಣಿಸುವಾಗ ಪ್ರತಿ ಪ್ರಕಾರದಲ್ಲೂ ಆ ವರ್ಷದಲ್ಲಿ ಕನಿಷ್ಠ ೧೦ ಶೀರ್ಷಿಕೆಗಳಾದರೂ ಪ್ರಕಟವಾಗಿರಬೇಕು. ಬಹುಮಾನದ ಮೊತ್ತ ತಲಾ ರೂ. ೫,೦೦೦/-ಗಳು.

೧೦) **ಕರ್ನಾಟಕ ಕೊಡವ ಸಾಹಿತ್ಯ ಅಕಾಡೆಮಿ**

ಅ) ಕೊಡವ ಭಾಷೆ, ಸಾಹಿತ್ಯ, ಕಲೆ ಮುಂತಾದ ಸಾಂಸ್ಕೃತಿಕ ಕ್ಷೇತ್ರದಲ್ಲಿ ಸಲ್ಲಿಸಿದ ಅನನ್ಯ ಸೇವೆಗಾಗಿ ಮೂವರನ್ನು ಮೀರದಂತೆ ಗೌರವ ಪ್ರಶಸ್ತಿಗಳನ್ನು ಕೊಡುವುದು. ಗೌರವ ಪ್ರಶಸ್ತಿಯ ಮೊತ್ತ ತಲಾ ರೂ. ೧೦,೦೦೦/-ಗಳು.

ಆ) ಕನ್ನಡ-ಕೊಡವ ಭಾಷಾಂತರವನ್ನು ಒಳಗೊಂಡಂತೆ ಗರಿಷ್ಠ ಮೂರು ಪುಸ್ತಕ ಬಹುಮಾನವನ್ನು ಕೊಡುವುದು. ಹೀಗೆ ಬಹುಮಾನಕ್ಕೆ ಪರಿಗಣಿಸುವಾಗ ಪ್ರತಿ ಪ್ರಕಾರದಲ್ಲೂ ಆ ವರ್ಷದಲ್ಲಿ ಕನಿಷ್ಠ ೧೦ ಶೀರ್ಷಿಕೆಗಳಾದರೂ ಪ್ರಕಟವಾಗಿರಬೇಕು. ಬಹುಮಾನದ ಮೊತ್ತ ರೂ. ೫,೦೦೦/-ಗಳು.

V. **ಅಕಾಡೆಮಿಯ ಅಧಿಕಾರಿ ವರ್ಗ :** ಈ ಮುಂದಿನವರು ಅಕಾಡೆಮಿಯ ಅಧಿಕಾರಿಗಳಾಗಿರುತ್ತಾರೆ.

೧) ಅಧ್ಯಕ್ಷರು

೨) ರಿಜಿಸ್ಟ್ರಾರ್‌ರು

೩) ಅರ್ಥ ಸದಸ್ಯರು

(ವಿವರಣೆ: ಇನ್ನು ಮುಂದೆ ಅರ್ಥ ಸದಸ್ಯರು ಎಂದು ಉಲ್ಲೇಖಿಸಲಾಗುವ ಕಡೆಗಳಲ್ಲಿ ಬೆಂಗಳೂರು ಕೇಂದ್ರಸ್ಥಾನವಾಗಿರುವ ಕರ್ನಾಟಕ ಸಾಹಿತ್ಯ ಅಕಾಡೆಮಿ, ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ, ಕರ್ನಾಟಕ ನಾಟಕ ಅಕಾಡೆಮಿ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಕರ್ನಾಟಕ ಲಲಿತಕಲಾ ಅಕಾಡೆಮಿ, ಕರ್ನಾಟಕ ಉರ್ದು ಅಕಾಡೆಮಿ, ಕರ್ನಾಟಕ ಶಿಲ್ಪಕಲಾ ಅಕಾಡೆಮಿಗಳಿಗೆ ಮಾತ್ರ ಅನ್ವಯಿಸಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಲೆಕ್ಕಪತ್ರಾಧಿಕಾರಿ ಈ ಅಕಾಡೆಮಿಗಳ ಪದನಿಮಿತ್ತ ಅರ್ಥ ಸದಸ್ಯ ಎಂದೂ; ಮಡಿಕೇರಿ ಕೇಂದ್ರಸ್ಥಾನವಾಗಿರುವ ಕರ್ನಾಟಕ ಕೊಡವ ಸಾಹಿತ್ಯ ಅಕಾಡೆಮಿಗೆ ಅನ್ವಯಿಸಿ ಕೊಡಗು

ಜಿಲ್ಲಾ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಹಾಯಕ ನಿರ್ದೇಶಕರು ಪದನಿಮಿತ್ತ ಅರ್ಥ ಸದಸ್ಯ ಎಂದೂ; ಮಂಗಳೂರು ಕೇಂದ್ರಸ್ಥಾನವಾಗಿರುವ ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ, ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿಗಳಿಗೆ ಅನ್ವಯಿಸಿ ದಕ್ಷಿಣ ಕನ್ನಡ ಜಿಲ್ಲಾ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಸಹಾಯಕ ನಿರ್ದೇಶಕರು ಪದನಿಮಿತ್ತ ಅರ್ಥ ಸದಸ್ಯ ಎಂದೂ ಪರಿಭಾವಿಸತಕ್ಕದ್ದು).

೧) ಅಧ್ಯಕ್ಷರು

ಅ) ರಾಜ್ಯ ಸರ್ಕಾರವು ಅಧ್ಯಕ್ಷರನ್ನು ನಾಮನಿರ್ದೇಶಿಸುತ್ತದೆ ಮತ್ತು ಅವರು ಮೂರು ವರ್ಷಗಳ ಅವಧಿಯವರೆಗೆ ಪದಧಾರಣ ಮಾಡತಕ್ಕದ್ದು. ಹೀಗೆ ಅಧ್ಯಕ್ಷರಾಗಿ ನಾಮನಿರ್ದೇಶಿತರಾದವರು ಯಾವುದೇ ಸಂಸ್ಥೆಯಲ್ಲಿ ಪೂರ್ಣಾವಧಿಗೆ ವೇತನ/ಸಂಭಾವನೆ ಪಡೆಯುವ ಉದ್ಯೋಗಿಯಾಗಿರಬಾರದು.

ಆ) ಅಧ್ಯಕ್ಷರು ಅಕಾಡೆಮಿಯ ಮುಖ್ಯಸ್ಥರಾಗಿರಬೇಕು. ಅವರು ಅಕಾಡೆಮಿಯ ಎಲ್ಲ ಸಮಿತಿಗಳ ಪದನಿಮಿತ್ತ ಸದಸ್ಯರಾಗಿರತಕ್ಕದ್ದು. ಮತ್ತು ಈಗ ಸ್ವಾಯತ್ತ ನಿಯಮಾವಳಿಯಡಿ ಮಾಡಲಾದ ನಿಯಮಗಳ ಮತ್ತು ಉಪಬಂಧಗಳ ಮೇರೆಗೆ ನೇಮಕಗೊಂಡ ಸ್ಥಾಯೀ ಸಮಿತಿಯ ಮತ್ತು ಇತರ ಸಮಿತಿಗಳ ಸಭೆಗಳ ಅಧ್ಯಕ್ಷತೆ ವಹಿಸತಕ್ಕದ್ದು.

ಇ) ಅಧ್ಯಕ್ಷರು ಅಕಾಡೆಮಿಯೊಡನೆ, ಸಂದರ್ಭಾನುಸಾರ, ಸ್ಥಾಯೀ ಸಮಿತಿಯೊಡನೆ ಸಮಾಲೋಚಿಸದೆ ಪ್ರತಿ ವರ್ಷಕ್ಕೆ ಗರಿಷ್ಠ ರೂ. ೨೦,೦೦೦/-ಗಳೊಳಪಟ್ಟು, ಪ್ರತಿ ಸಂದರ್ಭದಲ್ಲೂ ಪ್ರತಿ ೫,೦೦೦/- ರೂಪಾಯಿ ಮಿತಿಯವರೆಗೆ ಅಕಾಡೆಮಿಯ ಉದ್ದೇಶಗಳಿಗೆ ಒಳಪಟ್ಟಂತೆ ಜರೂರು ಸ್ವರೂಪದ ಯಾವುದೇ ಕಾರ್ಯಕ್ರಮವನ್ನು ನಿರ್ಧರಿಸಲು ಅಧಿಕಾರ ಹೊಂದಿರತಕ್ಕದ್ದು. ಮತ್ತು ಅಧ್ಯಕ್ಷರಿಂದ ಹಾಗೆ ಅನುಮೋದನೆ ಪಡೆದ ವೆಚ್ಚ ಭರಿಸಲು ರಿಜಿಸ್ಟ್ರಾರರು ವಿಧಿಬದ್ಧರಾಗಿರತಕ್ಕದು. ಹಾಗಿದ್ದರೂ, ಅಧ್ಯಕ್ಷರು ಇಂಥ ವೆಚ್ಚದ ವಿವರ ಗಳನ್ನು ಅಕಾಡೆಮಿಯ ಮುಂದಿನ ಸಭೆಯಲ್ಲಿ ಇಡತಕ್ಕದ್ದು.

ಈ) ಅಧ್ಯಕ್ಷರು ಗೌರವ ಸಂಭಾವನೆಯಾಗಿ ಮಾಹೆಯಾನ ರೂ. ೫,೦೦೦/-ಗಳನ್ನು ಪಡೆಯಬಹುದು.

ಉ) ಅಧ್ಯಕ್ಷರ ನಿವಾಸ ದೂರವಾಣಿ ಶುಲ್ಕವನ್ನು ತಿಂಗಳಿಗೆ ರೂ. ೩,೦೦೦/- ಮೀರ ದಂತೆ ಅಕಾಡೆಮಿ ಭರಿಸಬೇಕು.

ಊ) ಅಕಾಡೆಮಿಯ ಕೇಂದ್ರ ಸ್ಥಳದಿಂದ ಹೊರಗಡೆಯಿಂದ ನಾಮ ನಿರ್ದೇಶಿತರಾದ ಅಧ್ಯಕ್ಷರ ಸಂದರ್ಭದಲ್ಲಿ, ಅಕಾಡೆಮಿಯ ಕಾರ್ಯಕಲಾಪಗಳಿಗೆ ಕೇಂದ್ರಸ್ಥಾನಕ್ಕೆ



ಬಂದಾಗ ಪ್ರಯಾಣಭತ್ಯೆ ಮತ್ತು ದಿನಭತ್ಯೆಯನ್ನು ಸರ್ಕಾರಿ ನಿಯಮಗಳಂತೆ ಪಡೆಯಬೇಕು; ಅಕಾಡೆಮಿಯ ಸಭೆಗಳ ಸಭಾಭತ್ಯೆ ಪಡೆಯುವಂತಿಲ್ಲ.

ಋ) ಅಕಾಡೆಮಿಯ ಅಧ್ಯಕ್ಷರಿಗೆ ಸರ್ಕಾರಿ ವಾಹನ ವ್ಯವಸ್ಥೆ ಕಲ್ಪಿಸಲಾಗುವುದಿಲ್ಲ. ಆದರೆ ಅಕಾಡೆಮಿಗಳ ಎಲ್ಲ ಕಾರ್ಯಗಳಿಗೆ ಪ್ರವಾಸ ಮಾಡುವಾಗ ಸರ್ಕಾರೇತರ ಸದಸ್ಯರ ಭತ್ಯೆ ಪಡೆಯಲು ಹಕ್ಕುಳ್ಳವರಾಗಿರುತ್ತಾರೆ.

೨) ರಿಜಿಸ್ಟ್ರಾರ್

ಅ) ಅಕಾಡೆಮಿಯ ರಿಜಿಸ್ಟ್ರಾರರು ಅಕಾಡೆಮಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯಾಗಿರತಕ್ಕದ್ದು.

ಆ) ಅವರು ಅಕಾಡೆಮಿಯು ಸ್ಥಾಪಿಸಬಹುದಾದ ಸ್ಥಾಯಿ ಸಮಿತಿ ಮತ್ತು ಇತರ ಸಮಿತಿಯ ಪದನಿಮಿತ್ತ ಸದಸ್ಯ - ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸ ತಕ್ಕದ್ದು.

ಇ) ರಿಜಿಸ್ಟ್ರಾರರ ಕರ್ತವ್ಯಗಳು ಕೆಳಕಂಡಂತಿರತಕ್ಕದ್ದು :

i) ಅಕಾಡೆಮಿಯ ದಾಖಲೆಗಳನ್ನು ಮತ್ತು ಅಂಥ ಇತರ ಸ್ವತ್ತುಗಳನ್ನು ಸಂರಕ್ಷಿಸುವುದು.

ii) ಅಕಾಡೆಮಿಯ ಪರವಾಗಿ ಅಧಿಕೃತ ಪತ್ರ ವ್ಯವಹಾರ ನಡೆಸುವುದು.

iii) ಅಕಾಡೆಮಿಯ ಸಂಪೂರ್ಣ ಆಡಳಿತ ನಿರ್ವಹಣೆ ಹಾಗೂ ಸಿಬ್ಬಂದಿಯ ಮೇಲ್ವಿಚಾರಣೆ ನಿಯಂತ್ರಣ ಮಾಡುವುದು.

iv) ಅಕಾಡೆಮಿಯ ಮತ್ತು ಅಕಾಡೆಮಿಯಿಂದ ನೇಮಕಗೊಂಡ ಎಲ್ಲ ಸಮಿತಿ ಗಳು ಸಭೆ ನಡೆಸುವ ಬಗ್ಗೆ ನೋಟೀಸುಗಳನ್ನು ನೀಡುವುದು.

v) ಈ ಎಲ್ಲ ಸಭೆಗಳ ನಡವಳಿಗಳನ್ನು ಸಿದ್ಧಪಡಿಸುವುದು ಮತ್ತು ನಿರ್ವಹಿಸು ವುದು.

vi) ಅಕಾಡೆಮಿಯಿಂದ ಅನುಮೋದಿತವಾದ ಕಾರ್ಯಕ್ರಮಗಳನ್ನು ಜಾರಿ ಗೊಳಿಸುವುದು.

vii) ಅಕಾಡೆಮಿಯ ಪರವಾಗಿ ಕರಾರುಗಳಿಗೆ ರುಜು ಹಾಕುವುದು.

viii) ಚಾಲ್ತಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, ಸರ್ಕಾರಿ ಆರ್ಥಿಕ ಸಂಹಿತೆ ಹಾಗೂ ಸಾದಿಲ್ವಾರು ನಿಯಮ ಗಳ ವ್ಯಾಪ್ತಿಗೊಳಪಟ್ಟು ವೆಚ್ಚವನ್ನು ಭರಿಸುವುದು. ಅಕಾಡೆಮಿಯ ಕಾರ್ಯಚಟುವಟಿಕೆ ಹಾಗೂ ಲೆಕ್ಕಪತ್ರಗಳ ತ್ರೈಮಾಸಿಕ ವರದಿಯನ್ನು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶಕರಿಗೆ ಸಲ್ಲಿಸುವುದು.

ix) ಸ್ವತ್ತು ಮತ್ತು ವಿನಿಯೋಗಗಳ ವ್ಯವಸ್ಥೆ ನೋಡಿಕೊಳ್ಳತಕ್ಕದ್ದು. ವಾರ್ಷಿಕ ಅಂದಾಜುಗಳನ್ನು ಮತ್ತು ಲೆಕ್ಕಪತ್ರಗಳ ವಿವರಣೆಗಳನ್ನು ಅರ್ಥ ಸದಸ್ಯರ ಸಮಾಲೋಚನೆಯಿಂದ ತಯಾರಿಸುವ ಮತ್ತು ಅಕಾಡೆಮಿಗಳಿಗೆ ಅವುಗಳನ್ನು ಒಪ್ಪಿಸುವ ಜವಾಬ್ದಾರಿ ಹೊಂದಿರತಕ್ಕದ್ದು.

x) ಅಕಾಡೆಮಿಯ ಲೆಕ್ಕಪತ್ರಗಳನ್ನು ನಿರ್ವಹಿಸುವುದು ಮತ್ತು ಅಕಾಡೆಮಿಗೆ ಸಂದಾಯವಾಗುವ ಯಾವುದೇ ಹಣಕ್ಕೆ ರಸೀದಿ ಹಾಕುವುದು.

xi) ವರ್ಷದ ಆಯವ್ಯಯದ ಪರಿಮಿತಿಯಲ್ಲಿ ಹಾಗೂ ಆರ್ಥಿಕ ನಿಯಮಗಳಿಗೊಳಪಟ್ಟು ವಾರ್ಷಿಕ ಕ್ರಿಯಾಯೋಜನೆಯನ್ನು ಸ್ಥಾಯೀ ಸಮಿತಿಯ ಮೂಲಕ ಪೂರ್ವಭಾವಿಯಾಗಿ ರೂಪಿಸಿ ಸರ್ಕಾರದ ಅನುಮೋದನೆಗೆ ಸಲ್ಲಿಸಬೇಕು. ಅನುಮೋದಿತವಾದ ಈ ಕ್ರಿಯಾ ಯೋಜನೆಯ ಪ್ರಕಾರ ಅನುಷ್ಠಾನಗೊಳಿಸಿ, ಅದರ ಭೌತಿಕ ಮತ್ತು ಆರ್ಥಿಕ ಪ್ರಗತಿಯ ವರದಿಯನ್ನು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಮೂಲಕ ಮೂರು ತಿಂಗಳಿಗೊಮ್ಮೆ ಸರ್ಕಾರಕ್ಕೆ ಸಲ್ಲಿಸಬೇಕು.

xii) ಅಕಾಡೆಮಿಯು ವಹಿಸಿಕೊಡಬಹುದಾದಂಥ ಇತರ ಅಧಿಕಾರಗಳನ್ನು ಚಲಾಯಿಸಬಹುದು.

**೩) ಅರ್ಥ ಸದಸ್ಯರು**

ಅ) i) ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಲೆಕ್ಕಪತ್ರಾಧಿಕಾರಿಯು ಅಕಾಡೆಮಿಯ ಪದನಿಮಿತ್ತ ಅರ್ಥ ಸದಸ್ಯರಾಗಿರತಕ್ಕುದು. ಮತ್ತು ಸ್ಥಾಯೀ ಸಮಿತಿಯ ಸದಸ್ಯರೂ ಆಗಿರತಕ್ಕದ್ದು.

ii) ಅಕಾಡೆಮಿಯ ನಿಯಮಗಳಿಗೆ ಒಳಪಟ್ಟು ಮತ್ತು ರಿಜಿಸ್ಟ್ರಾರರ ಸಹ ಹೊಣೆಗಾರಿಕೆಯಲ್ಲಿ ಬಜೆಟ್ ಸಿದ್ಧಪಡಿಸುವ ಹಾಗೂ ಅನುಮೋದಿತ ಕಾರ್ಯಕ್ರಮಗಳಿಗೆ ಸರಿಯಾಗಿ ಬಳಸಿಕೊಳ್ಳಲು ಜವಾಬ್ದಾರರಾಗಿರತಕ್ಕದ್ದು.

iii) ಅಕಾಡೆಮಿಯಿಂದ ಪಾವತಿ ಮಾಡುವ ಹಣಕ್ಕೆ ಸೂಕ್ತ ದಾಖಲೆ ಪಡೆಯುವುದು.

ಆ) i) ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕೊಡಗು ಜಿಲ್ಲೆಯ ಸಹಾಯಕ ನಿರ್ದೇಶಕರು ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಹಾಯಕ ನಿರ್ದೇಶಕರು ಕ್ರಮವಾಗಿ ಕರ್ನಾಟಕ ಕೊಡವ



ಸಾಹಿತ್ಯ ಅಕಾಡೆಮಿ ಮತ್ತು ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ ಹಾಗೂ ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿಗಳ ಪದನಿಮಿತ್ತ ಅರ್ಥ ಸದಸ್ಯರಾಗಿರತಕ್ಕದ್ದು ಮತ್ತು ಸ್ಥಾಯೀ ಸಮಿತಿಯ ಸದಸ್ಯರು ಆಗಿರತಕ್ಕದ್ದು.

ii) ಮೇಲ್ಕಂಡಂತೆ ಅರ್ಥಸದಸ್ಯರಿಗೆ ಗೊತ್ತುಪಡಿಸಿರುವ ಎಲ್ಲ ಜವಾಬ್ದಾರಿಗಳು ಇವರಿಗೂ ಅನ್ವಯಿಸುತ್ತವೆ.

**VI. ಅಕಾಡೆಮಿಯ ಪ್ರಾಧಿಕಾರಗಳು :** ಈ ಕೆಳಕಂಡವು ಅಕಾಡೆಮಿಯ ಪ್ರಾಧಿಕಾರಗಳಾಗಿರತಕ್ಕದ್ದು. ಎಂದರೆ :

೧) ಅಕಾಡೆಮಿ

೨) ಸ್ಥಾಯೀ ಸಮಿತಿ

**೧) ಅಕಾಡೆಮಿ**

i) **ಅಕಾಡೆಮಿಯು ಕೆಳಕಂಡ ೧೭ ಸದಸ್ಯರನ್ನು ಮಾತ್ರ ಹೊಂದಿರತಕ್ಕುದು.**

ಅ) ಅಧ್ಯಕ್ಷರು

ಆ) ರಿಜಿಸ್ಟ್ರಾರರು

ಇ) ಅರ್ಥ ಸದಸ್ಯರು

ಈ) ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ನಿರ್ದೇಶಕರು ಅಥವಾ ಅವರ ಪ್ರತಿನಿಧಿ (ಉಪ ನಿರ್ದೇಶಕರ ಶ್ರೇಣಿಗೆ ಕಡಿಮೆ ಇಲ್ಲದಂತೆ)

ಉ) ರಾಜ್ಯ ಸರ್ಕಾರದಿಂದ ನಾಮನಿರ್ದೇಶಿತರಾದ ೧೦ ಮಂದಿ ಸದಸ್ಯರು

ಊ) ಅಕಾಡೆಮಿಯ ಮೊದಲ ಸಭೆಯಲ್ಲಿ ಅಕಾಡೆಮಿಯು ಆಯ್ಕೆ ಮಾಡಿಕೊಂಡ ೩ ಮಂದಿ (ಕೋ-ಆಪ್ಟ್) ಸಹ ಸದಸ್ಯರು

ಋ) ರಾಜ್ಯ ಸರ್ಕಾರದಿಂದ ನಾಮನಿರ್ದೇಶಿತರಾದ ಅಧ್ಯಕ್ಷರು/ಸದಸ್ಯರು ರಾಜೀನಾಮೆ ನೀಡಿದ ಅಥವಾ ಮರಣ ಹೊಂದಿದ ಅಥವಾ ಕಾನೂನಿನ ಕಾರಣದಿಂದ ಮುಂದುವರೆಯಲು ಅಸಮರ್ಥರಾದ ಕಾರಣದಿಂದ ಖಾಲಿಯಾದ ಯಾವುದೇ ಸ್ಥಾನವನ್ನು ತುಂಬಲು ರಾಜ್ಯ ಸರ್ಕಾರವು ವ್ಯಕ್ತಿಗಳನ್ನು ನಾಮನಿರ್ದೇಶಿಸಬಹುದು. ಹಾಗೆ ನಾಮನಿರ್ದೇಶಿತನಾದ ವ್ಯಕ್ತಿಯು ಅಕಾಡೆಮಿಯ ಉಳಿದ ಬಾಕಿ ಅವಧಿಗೆ ಮಾತ್ರ ಪದಧಾರಣ ಮಾಡತಕ್ಕದ್ದು.

ಎ) ಸಹ ಆಯ್ಕೆಯ ಸದಸ್ಯರು ರಾಜೀನಾಮೆ ನೀಡಿದಲ್ಲಿ ಅಥವಾ

ಮೃತನಾದಲ್ಲಿ ಅವನ ಸ್ಥಾನಕ್ಕೆ ಉಳಿದ ಅವಧಿಗೆ ಮಾತ್ರ ಅಕಾಡೆಮಿಯ ಸರ್ವಸದಸ್ಯರ ಸಭೆಯಲ್ಲಿ ಬೇರೊಬ್ಬರನ್ನು ತುಂಬಿಕೊಳ್ಳತಕ್ಕದ್ದು.

ಎ) ಅಧಿಕೃತ ಸದಸ್ಯರು ಮತ್ತು ಸಹ ಆಯ್ಕೆ ಸದಸ್ಯರು ಏಕಕಾಲದಲ್ಲಿ ಒಂದಕ್ಕಿಂತ ಹೆಚ್ಚು ಅಕಾಡೆಮಿಗಳ ಸದಸ್ಯನಾಗಿರತಕ್ಕುದಲ್ಲ. ಮತ್ತು ಸತತವಾಗಿ ಒಂದಕ್ಕಿಂತ ಹೆಚ್ಚು ಅವಧಿಗೆ ಅಕಾಡೆಮಿಯ ಸದಸ್ಯನಾಗಿ ನಾಮನಿರ್ದೇಶಿತನಾಗಿರತಕ್ಕುದಲ್ಲ.

ii) **ಅಕಾಡೆಮಿಯ ಕರ್ತವ್ಯಗಳು ಮತ್ತು ಅಧಿಕಾರಗಳು**

ಅ) ಈ ನಿಯಮಗಳಡಿ ಉಪಬಂಧಿಸಿದಂತೆ ಸರ್ವಸದಸ್ಯರ ಮೊದಲ ಸಭೆಯಲ್ಲಿ ಸ್ಥಾಯೀ ಸಮಿತಿಯ ಸದಸ್ಯರನ್ನು ಆಯ್ಕೆ ಮಾಡುವುದು. ಸರ್ವಸದಸ್ಯರ ಸಭೆಯ ಕೋರಂ ೧/೩ ಇರಬೇಕು.

ಆ) ಯಾವುದೇ ಸದಸ್ಯರು ಅನುಕ್ರಮವಾಗಿ ನಿರಂತರ ಮೂರು ಸಭೆಗಳಿಗೆ ಅಧ್ಯಕ್ಷರ ಅನುಮತಿ ಪಡೆಯದೆ ಗೈರುಹಾಜರಾದರೆ ಆ ಸದಸ್ಯನ ಸದಸ್ಯತ್ವವು ರದ್ದಾಗುವುದು.

ಇ) ನಿರ್ದಿಷ್ಟ ಉದ್ದೇಶಗಳಿಗಾಗಿ ಮತ್ತು ನಿರ್ದಿಷ್ಟ ಅವಧಿಗಾಗಿ ತನ್ನ ಸದಸ್ಯರ ಪೈಕಿಯಿಂದ ಆಯ್ಕೆ ಮಾಡಿದ ಪ್ರತಿಯೊಂದು ಉಪಸಮಿತಿಯಲ್ಲಿ ೩ಕ್ಕಿಂತ ಹೆಚ್ಚು ಸದಸ್ಯರಿರದಂತೆ ಉಪಸಮಿತಿಗಳನ್ನು ರಚಿಸುವುದು. ಈ ಉಪಸಮಿತಿಗೆ ನಿರ್ದಿಷ್ಟ ಕೆಲಸ ಮತ್ತು ಅವಧಿಗಾಗಿ ಹೊರಗಿನಿಂದ ಪರಿಣತರನ್ನು/ಸದಸ್ಯರನ್ನಾಗಿ ತೆಗೆದುಕೊಳ್ಳಬಹುದು. ಈ ಸಮಿತಿಗಳು ತಮ್ಮ ವರದಿಗಳನ್ನು / ಶಿಫಾರಸ್ಸುಗಳನ್ನು ಅಕಾಡೆಮಿಗೆ ಒಪ್ಪಿಸತಕ್ಕದ್ದು. ಅದಾದ ಮೇಲೆ ಆ ಉಪಸಮಿತಿಗಳು ತಂತಾನೆ ವಿಸರ್ಜನೆಗೊಳ್ಳುತ್ತವೆ.

ಈ) ಸ್ಥಾಯೀ ಸಮಿತಿಯು ಸಿದ್ಧಪಡಿಸಿದ ವಾರ್ಷಿಕ ಕ್ರಿಯಾಯೋಜನೆಗಳನ್ನು ಮತ್ತು ವಾರ್ಷಿಕ ಬಜೆಟ್ಟನ್ನು ಪರಿಶೀಲಿಸುವುದು ಮತ್ತು ಅನುಮೋದಿಸುವುದು ಹಾಗೂ ಅನುಷ್ಠಾನಕ್ಕೆ ಪೂರ್ವದಲ್ಲಿ ಈ ಕ್ರಿಯಾ ಯೋಜನೆಗೆ ಸರ್ಕಾರದಿಂದ ಅನುಮೋದನೆ ಪಡೆಯುವುದು. ಬಜೆಟ್‌ನಲ್ಲಿ ಹಂಚಿಕೆ ಮಾಡಿದ ಆಯವ್ಯಯದ ಪರಿಮಿತಿಯ ಹಣದಲ್ಲಿ ನಿಯಮಗಳಂತೆ ಕಾರ್ಯಕ್ರಮಗಳನ್ನು ಜಾರಿಗೊಳಿಸುವುದು.

ಉ) ಕಾರ್ಯಕ್ರಮಗಳ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಮಾರ್ಗದರ್ಶನ ಸೂತ್ರಗಳನ್ನು ರಚಿಸುವುದು.



ಊ) ಅಕಾಡೆಮಿಯು, ಆರ್ಥಿಕ ವರ್ಷದಲ್ಲಿ ತನ್ನ ಸರ್ವಸದಸ್ಯರ ಸಭೆಯನ್ನು ಸ್ಥಾಯೀ ಸಮಿತಿಯು ನಿಗದಿಪಡಿಸಿದ ದಿನಾಂಕದಂದು ಕೇಂದ್ರ ಸ್ಥಳದಲ್ಲಿ ನಾಲ್ಕು ತಿಂಗಳಿಗೊಂದು ಸಲ ಸಭೆ ಸೇರತಕ್ಕದ್ದು. ಅಧ್ಯಕ್ಷರು ಅಥವಾ ಸ್ಥಾಯೀ ಸಮಿತಿಯು ತಾವಾಗಿಯೇ ಅಥವಾ ಅಕಾಡೆಮಿಯು ೧/೩ರಷ್ಟು ಸದಸ್ಯರಿಗಿಂತ ಕಡಿಮೆಯಿಲ್ಲದಷ್ಟು ಸದಸ್ಯರ ಕೋರಿಕೆಯ ಮೇರೆಗೆ ಯಾವುದೇ ಇತರ ಸಮಯದಲ್ಲಿ ಒಂದು ವಿಶೇಷ ಸಭೆಯನ್ನು ಕರೆಯಬಹುದು.

ಋ) ಅಕಾಡೆಮಿಯು ನಿಯಮ VIIರಲ್ಲಿ ವಿವರಿಸಿರುವಂತೆ, ವಿವಿಧ ಮೂಲಗಳ ಮೂಲಕ ಸರ್ಕಾರದಿಂದ ಮಂಜೂರಾದ ಅನುದಾನಗಳೂ ಸೇರಿದಂತೆ ತನ್ನ ನಿಧಿಗಳ ಪರಿಮಿತಿಗಳೊಡನೆ ಅಕಾಡೆಮಿಯ ಉದ್ದೇಶ, ಗುರಿ ಮತ್ತು ಧ್ಯೇಯಗಳ ಜಾರಿಗಾಗಿ ಎಲ್ಲ ಆಡಳಿತಾತ್ಮಕ ಮತ್ತು ಆರ್ಥಿಕ ಅಧಿಕಾರವನ್ನು ಚಲಾಯಿಸಲು ಅಗತ್ಯವೆಂದು ಭಾವಿಸುವ ಉಪನಿಯಮಗಳು ಹಾಗೂ ಕಾರ್ಯವಿಧಾನ ನಿಯಮಗಳನ್ನು ರಚಿಸಿ ಅವುಗಳಿಗೆ ಸರ್ಕಾರದ ಅನುಮೋದನೆ ಪಡೆದು ಅನುಷ್ಠಾನಗೊಳಿಸುವುದು.

೨) **ಸ್ಥಾಯೀ ಸಮಿತಿ**

i) ಸ್ಥಾಯೀ ಸಮಿತಿಯು ಈ ಕೆಳಕಂಡ ೭ ಮಂದಿ ಸದಸ್ಯರನ್ನು ಹೊಂದಿರುತ್ತದೆ ಅಂದರೆ :

ಅ) ಅಧ್ಯಕ್ಷರು

ಆ) ರಿಜಿಸ್ಟ್ರಾರರು

ಇ) ಅರ್ಥ ಸದಸ್ಯರು

ಈ) ಅಕಾಡೆಮಿಯ ಸಾಮಾನ್ಯ ಸಭೆ ಆಯ್ಕೆ ಮಾಡುವ ೪ ಮಂದಿ ಸದಸ್ಯರು

ii) ಸ್ಥಾಯೀ ಸಮಿತಿಯು ಕೆಳಕಂಡ ಅಧಿಕಾರ ಮತ್ತು ಕರ್ತವ್ಯಗಳನ್ನು ಹೊಂದಿದೆ.

ಅ) ಅಕಾಡೆಮಿಯ ಕಾರ್ಯಕಾರಿ ಅಧಿಕಾರವನ್ನು ಚಲಾಯಿಸುವುದು.

ಆ) ಅಕಾಡೆಮಿಯ ಮತ್ತು ಅದರ ಕಚೇರಿಯ ಕೆಲಸದ ಮೇಲ್ವಿಚಾರಣೆ ಮತ್ತು ಕಾರ್ಯಕ್ರಮಗಳ ಅನುಷ್ಠಾನ ನಿಯಂತ್ರಣಕ್ಕೆ ಹೊಣೆಯಾಗಿರುವುದು.

ಇ) ಅಕಾಡೆಮಿಯ ಕಾರ್ಯಕ್ರಮಗಳನ್ನು ರೂಪಿಸುವುದು, ಪರ್ಯಾಲೋಚಿಸುವುದು. ಮತ್ತು ಈ ಕಾರ್ಯಯೋಜನೆಗಳನ್ನು ಅಕಾಡೆಮಿಗೆ ಒಪ್ಪಿಸುವುದು.

ಈ) ಅಕಾಡೆಮಿಯ ಅನುಮೋದನೆಗಾಗಿ ಒಪ್ಪಿಸತಕ್ಕ ಅಕಾಡೆಮಿಯ ವಾರ್ಷಿಕ ಬಜೆಟ್‌ನ್ನು (ಸರ್ಕಾರದಿಂದ ಗೊತ್ತುಪಡಿಸಿದ ಆರ್ಥಿಕ ಮಿತಿಗಳಿಗೆ ಒಳಪಟ್ಟು) ರೂಪಿಸುವುದು. ಹಾಗೂ ಕಾರ್ಯಕ್ರಮಗಳನ್ನು ಚಾಲ್ತಿ ನಿಯಮಗಳಂತೆಯೇ ಅನುಷ್ಠಾನಗೊಳಿಸಲು ಬದ್ಧವಾಗಿರಬೇಕು.

ಉ) ಅಕಾಡೆಮಿಯ ಪರಿಶೀಲನೆಗಾಗಿ ಅಕಾಡೆಮಿಯ ವಾರ್ಷಿಕ ವರದಿಯನ್ನು ಮತ್ತು ಲೆಕ್ಕಪತ್ರಗಳನ್ನು ಗೊತ್ತುಪಡಿಸಿಕೊಂಡ ಕ್ರಮದಲ್ಲಿ ತಯಾರಿಸುವುದು.

ಊ) ಸ್ಥಾಯೀ ಸಮಿತಿಯು ತಿಂಗಳಲ್ಲಿ ಒಂದು ಸಲ ಕೇಂದ್ರ ಸ್ಥಾನದಲ್ಲಿ ಸಭೆ ಸೇರಬೇಕು. ಆದರೆ ಅತ್ಯಂತ ಅಗತ್ಯವಾದ ತುರ್ತು ಸಂದರ್ಭದಲ್ಲಿ ಇನ್ನೊಂದು ಸಭೆ ಸೇರಬಹುದು. (ಉದಾಹರಣೆ : ಪ್ರಶಸ್ತಿ ಪ್ರದಾನ ಸಮಾರಂಭ ಇತ್ಯಾದಿ).

ಋ) ಅಕಾಡೆಮಿಯ ಅಧ್ಯಕ್ಷರು ಸ್ಥಾಯೀ ಸಮಿತಿಯ ಸಭೆಯ ಅಧ್ಯಕ್ಷತೆ ವಹಿಸತಕ್ಕದ್ದು ಮತ್ತು ಅವರ ಗೈರುಹಾಜರಿಯಲ್ಲಿ ಸದಸ್ಯರು ತಮ್ಮ ಪೈಕಿ ಒಬ್ಬ ಸದಸ್ಯರನ್ನು ಅಂಥ ಸಭೆಯ ಅಧ್ಯಕ್ಷತೆ ವಹಿಸಲು ಚುನಾಯಿಸತಕ್ಕದ್ದು.

## VII. ಅಕಾಡೆಮಿಯ ಹಣಕಾಸು

ಅ) ಅಕಾಡೆಮಿಯ ನಿಧಿಗಳು ಕೆಳಕಂಡವುಗಳನ್ನು ಒಳಗೊಂಡಿರತಕ್ಕದ್ದು.

೧) ಅಕಾಡೆಮಿಯ ಉದ್ದೇಶಗಳ ಅನುಷ್ಠಾನ ಮತ್ತು ವಿಸ್ತರಣೆಗಾಗಿ ಕರ್ನಾಟಕ ಸರ್ಕಾರ, ಭಾರತ ಸರ್ಕಾರ, ಕೇಂದ್ರ ಅಕಾಡೆಮಿಗಳು, ನವದೆಹಲಿ-ಇವುಗಳಿಂದ ಹಾಗೂ ಖಾಸಗಿ ಸಂಸ್ಥೆ ಹಾಗೂ ಸಾರ್ವಜನಿಕರಿಂದ ಬಂದ ಅನುದಾನಗಳು, ಕೊಡುಗೆಗಳು, ವಂತಿಕೆಗಳು, ದಾನಗಳು, ಮುಂಗಡಗಳು ಮತ್ತು ಸಾಲಗಳು.

೨) ಅಕಾಡೆಮಿಯ ಉತ್ಪನ್ನಗಳ ಹಾಗೂ ಕಲಾಕೃತಿಗಳ ಮಾರಾಟದಿಂದ ಬಂದ ಜಮೆಗಳು; ಮತ್ತು ಅಕಾಡೆಮಿಯು ಇತರ ಯಾವುದೇ ರೀತಿಯಲ್ಲಿ ಸ್ವೀಕರಿಸಿದ ಎಲ್ಲಾ ಇತರ ಹಣ.

ಆ) ಅಕಾಡೆಮಿ ರಿಜಿಸ್ಟ್ರಾರ್ ಮತ್ತು ಅರ್ಥ ಸದಸ್ಯರು ಜಂಟಿಯಾಗಿ ರಾಷ್ಟ್ರೀಕೃತ ಬ್ಯಾಂಕ್‌ನಲ್ಲಿ ಖಾತೆ ತೆಗೆದು ನಿರ್ವಹಿಸಬೇಕು.

ಇ) ಅಕಾಡೆಮಿಯಿಂದ ಅಥವಾ ಅಕಾಡೆಮಿಯ ಪರವಾಗಿ ಸ್ವೀಕರಿಸಲಾದ ಎಲ್ಲಾ ಹಣವನ್ನು ಅಕಾಡೆಮಿಯ ಕೇಂದ್ರ ಸ್ಥಾನದಲ್ಲಿರುವ ಯಾವುದೇ ಅನುಸೂಚಿತ



ಬ್ಯಾಂಕ್‌ನಲ್ಲಿ ಮಾತ್ರ ಅಕಾಡೆಮಿಯ ಹೆಸರಿನಲ್ಲಿ ಇಡತಕ್ಕದ್ದು. ಅಕಾಡೆಮಿ ಅಥವಾ ಸ್ಥಾಯೀ ಸಮಿತಿ ಅಥವಾ ಅಧ್ಯಕ್ಷರಿಂದ ಅನುಮೋದಿತವಾದ ಒಂದು ನಿರ್ದಿಷ್ಟ ಉದ್ದೇಶಕ್ಕಾಗಿ ಅರ್ಥ ಸದಸ್ಯರಿಂದ ಮತ್ತು ರಿಜಿಸ್ಟ್ರಾರರಿಂದ ರುಜು ಹಾಕಿದ ಚೆಕ್‌ನ ಹೊರತಾದ ಹಣವನ್ನು ಡ್ರಾ ಮಾಡತಕ್ಕುದಲ್ಲ, ಹಾಗಿದ್ದರೂ ಈ ಅಧಿಕಾರಿಗಳ ಪೈಕಿ ಯಾರಾದರೂ ಜರೂರು ಸಂದರ್ಭದಲ್ಲಿ ಒಂದು ನಿರ್ದಿಷ್ಟ ಕಾರ್ಯಕ್ರಮಕ್ಕೆ ೧೦೦೦೦/- ರೂಪಾಯಿಗೆ ಮೀರದಷ್ಟು ಹಣವನ್ನು ಚೆಕ್‌ನ ಮೂಲಕ ಪಡೆಯಬಹುದು. ಆದರೆ ಹಾಗೆ ಮಾಡಿದ ವೆಚ್ಚದ ಬಗ್ಗೆ ಅನುಮೋದನೆಯನ್ನು ಆ ತರುವಾಯ ಕೂಡಲೆ ಸ್ಥಾಯೀ ಸಮಿತಿಯಿಂದ ಪಡೆಯತಕ್ಕದ್ದು ಮತ್ತು ಲೆಕ್ಕಕ್ಕೆ ತೆಗೆದುಕೊಳ್ಳತಕ್ಕದ್ದು.

ಈ) ಅಕಾಡೆಮಿಗೆ ಸರ್ಕಾರದಿಂದ ಬರುವ ಅನುದಾನದ ಜೊತೆಗೆ ಬೇರೆ ಮೂಲಗಳಿಂದ ಬರುವ ದಾನ, ಕೊಡುಗೆ, ವಂತಿಗೆ ಮತ್ತು ಪುಸ್ತಕ ಹಾಗೂ ಕಲಾಕೃತಿಗಳ ಮಾರಾಟದಿಂದ ಬರುವ ಎಲ್ಲ ಹಣವನ್ನು ಅಕಾಡೆಮಿಯ ಖಾತೆಗೆ ಜಮಾ ಮಾಡಬೇಕು ಮತ್ತು ಅಕಾಡೆಮಿಯ ಎಲ್ಲಾ ಜಮಾ ಖರ್ಚುಗಳನ್ನು ಒಂದೇ ರಿಜಿಸ್ಟರ್‌ನಲ್ಲಿ ನಿರ್ವಹಿಸಬೇಕು.

ಉ) ಅಕಾಡೆಮಿಯ ಹೆಸರಿನಲ್ಲಿರುವ ಎಲ್ಲ ಹಣವನ್ನು ಅಕಾಡೆಮಿಗೆ ಅನ್ವಯಿಸತಕ್ಕ ನಿಯಮಗಳ ಪ್ರಕಾರ ಮತ್ತು ಸಂದರ್ಭಾನುಸಾರ ಅಕಾಡೆಮಿಯ ಅಥವಾ ಸ್ಥಾಯೀ ಸಮಿತಿಯ ನಿರ್ಣಯಗಳ ಪ್ರಕಾರ ಅಕಾಡೆಮಿಯ ಯಾವುದೇ ಉದ್ದೇಶಗಳಿಗಾಗಿ ವೆಚ್ಚ ಮಾಡತಕ್ಕದ್ದು. ಈ ವೆಚ್ಚಗಳು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, ಕರ್ನಾಟಕ ಸರ್ಕಾರದ ಆರ್ಥಿಕ ಸಂಹಿತೆ, ಖಜಾನೆ ಸಂಹಿತೆ ಮತ್ತು ಸಾದಿಲ್ವಾರು ನಿಯಮಗಳಿಗೆ ಒಳಪಟ್ಟಿರಬೇಕು.

ಊ) ಅಕಾಡೆಮಿಯ ಅಧಿಕಾರೇತರ ಸದಸ್ಯರು ಮಾತ್ರ ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಯ 'ಎ' ಅನುಬಂಧದಲ್ಲಿರುವ ಪ್ರಯಾಣ ಭತ್ಯೆ ಮತ್ತು ದಿನಭತ್ಯೆ ಪಡೆಯಲು ಅರ್ಹರಿರುತ್ತಾರೆ. ಅವರು ಅಕಾಡೆಮಿಯ ಮತ್ತು ಯಾವುದೇ ಸಮಿತಿಗಳ ಸಭೆಗಳಿಗೆ ಹಾಜರಾದಲ್ಲಿ ಪ್ರತಿದಿನಕ್ಕೆ ಸಭಾಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ. ಅಕಾಡೆಮಿಯ ಅಧ್ಯಕ್ಷರು, ರಿಜಿಸ್ಟ್ರಾರ್, ಸರ್ಕಾರಿ ಸದಸ್ಯರು ಹಾಗೂ ಅರ್ಥ ಸದಸ್ಯರು ಸಭಾಭತ್ಯೆ ಪಡೆಯಲು ಅರ್ಹರಾಗಿರುವುದಿಲ್ಲ.

ಋ) ಅಕಾಡೆಮಿಯ ಲೆಕ್ಕಪತ್ರಗಳನ್ನು ರಾಜ್ಯ ಲೆಕ್ಕಪತ್ರ ಇಲಾಖೆ/ಅಕೌಂಟೆಂಟ್ ಜನರಲ್‌ರವರು ಪ್ರತಿವರ್ಷ ಪರಿಶೋಧಿಸತಕ್ಕದ್ದು.

## VII. ಸರ್ಕಾರಿ ನೌಕರರಿಗೆ ಮತ್ತು ಕಚೇರಿಗಳಿಗೆ ಅನ್ವಯಿಸತಕ್ಕ ಕರ್ನಾಟಕ ಸಿವಿಲ್ ಸೇವಾ

ನಿಯಮಾವಳಿಗಳು, ಕರ್ನಾಟಕ ಆರ್ಥಿಕ ಸಂಹಿತೆಯ, ಕರ್ನಾಟಕ ಖಜಾನೆ ಸಂಹಿತೆಯ ಮತ್ತು ಇತರ ನಿಯಮಗಳು ಅಕಾಡೆಮಿಯ ಉದ್ಯೋಗಿಗಳಿಗೆ ಅನ್ವಯಿಸತಕ್ಕದ್ದು.

IX. ಅಕಾಡೆಮಿಯು ಗೊತ್ತುಪಡಿಸಬಹುದಾದ ಇತರ ವರದಿಗಳನ್ನಲ್ಲದೆ ಅಕಾಡೆಮಿಯ ಕಾರ್ಯಚಟುವಟಿಕೆಗಳು ಹಾಗೂ ವೆಚ್ಚ ವಿವರಗಳ ಬಗ್ಗೆ ಸರ್ಕಾರಕ್ಕೆ ವಾರ್ಷಿಕ ವರದಿಯನ್ನು ಸಲ್ಲಿಸತಕ್ಕದ್ದು.

X. ರಾಜ್ಯ ಸರ್ಕಾರವು ತನ್ನ ಕಾರ್ಯನೀತಿ, ಹಣಕಾಸು ಮತ್ತು ಸಾರ್ವಜನಿಕ ಮಹತ್ವವುಳ್ಳ ವಿಷಯಗಳ ಮೇಲೆ ತಾನು ಅವಶ್ಯವೆಂದು ಭಾವಿಸುವಂಥ ಸೂಚನೆಗಳನ್ನು ಅಕಾಡೆಮಿಗಳಿಗೆ ನೀಡಬಹುದು. ಅಕಾಡೆಮಿಯು ಅಂಥ ಸೂಚನೆಗಳನ್ನು ಪಾಲಿಸತಕ್ಕದ್ದು ಮತ್ತು ಅವಶ್ಯವೆಂದು ಭಾವಿಸುವಂಥ ವರದಿಗಳನ್ನು ಮತ್ತು ಇತರ ಮಾಹಿತಿಯನ್ನು ಒದಗಿಸತಕ್ಕದ್ದು.

ಸಹಿ/-

(ಟಿ.ಕೆ. ರಾಮಚಂದ್ರ)

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)

ಕನ್ನಡ ಮತ್ತು ಸಂಸ್ಕೃತಿ ಇಲಾಖೆ